ಅಂತರ ಭಾರತೀಯ ಪುಸ್ತಕ ಮಾಲೆ

# ಕುರಿಗಾಹಿ ಬಿಲ್ಲೇಸುರ

ಸೂರ್ಯಕಾಂತ ತ್ರಿಪಾಠಿ 'ನಿರಾಲಾ'

ಅನುವಾದ:

ವೀಣಾ ಶಾಂತೇಶ್ವರ




ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಮುಖಪುಟ ಚಿತ್ರ: ಸಮರೇಶ್ ಚಾಟರ್ಜೀ

ISBN 81-237-3374-7

ಮೊದಲ ಮುದ್ರಣ : 2000 (*ಶಕ 1922*)



Original Title:Billesur Bakariha (*Hindi*)
Kannada Translation : Kurigahi Billesura

ರೂ. 25.00

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ - 110 016 ಇವರಿಂದ ಪ್ರಕಟಿತ.

# ಮುನ್ನುಡಿ

ನಿರಾಲಾ (1899-1961) 'ಛಾಯಾವಾದ'ದ ಒಬ್ಬ ಶ್ರೇಷ್ಠ ಕವಿಯೆಂದು ಹೆಸರು ಗಳಿಸಿದ್ದರೂ ಛಾಯಾವಾದದ ಪರಿಧಿಯನ್ನು ದಾಟಿ 'ಯಥಾರ್ಥವಾದ'ದ ನಿಲುವುಗಳನ್ನು ಪ್ರತಿಪಾದಿಸಿ ಹೆಚ್ಚಿನ ಹೆಸರು ಪಡೆದರು. ಇದನ್ನು ಅವರ *ಕುಕುರ ಮುತ್ತಾ* ಮತ್ತು *ನಯೇಪತ್ತೇ* ಸಂಕಲಗಳ ಕವಿತೆಗಳಲ್ಲಿ ಮತ್ತು *ಚತುರಿಚಮಾರ, ಕುಲ್ಲೀಭಾಟ* ಹಾಗೂ *ಬಿಲ್ಲೇಸುರ ಬಕರಿಹ*ದಂತಹ ಕೃತಿಗಳ ಕತೆಗಳಲ್ಲಿ ಕಾಣಬಹುದು. ನಿರಾಲಾ ಅವರು ಬರೆಯುತ್ತಿದ್ದ ನಾಲ್ಕೂ ದಶಕಗಳ ಅವಧಿಯಲ್ಲಿ ದೇಶದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆದಿತ್ತು. ಅವರ ಒಟ್ಟು ಸಾಹಿತ್ಯ ರಚನೆಯ ಸಮೀಕ್ಷೆ ಮಾಡಿದಾಗ ಸ್ವಾತಂತ್ರ್ಯದ ಬಗೆಗಿನ ಅವರ ಒಲವುಗಳ ಬೆಳವಣಿಗೆ ಸ್ಪಷ್ಟ ರೂಪ ಪಡೆದದ್ದು ಕಾಣುತ್ತದೆ. ತಮ್ಮ *ಪರಿಮತ* (1929) ಕೃತಿಯ ಮುನ್ನುಡಿಯಲ್ಲಿ ನಿರಾಲಾ ಅವರು ಕಾವ್ಯದ ವಿಮೋಚನೆಯ ಪ್ರಶ್ನೆಯನ್ನು ವಿಶ್ಲೇಷಿಸಿದ್ದರು. ಪ್ರಚಲಿತ ತಂತ್ರಕ್ಕಿಂತ ಭಿನ್ನವಾದ ಹೊಸ ಕಥನ ಶೈಲಿಯ ಹುಡುಕಾಟದಲ್ಲಿ ಅವರು ತೊಡಗಿದ್ದರು. ಹಾಸ್ಯ, ವ್ಯಂಗ್ಯ ಹಾಗೂ ವಾಸ್ತವದ ನೋವು- ಈ ಮೂರನ್ನೂ ಮಾರ್ಮಿಕವಾಗಿ ಅವರು ಸಂಯೋಜನೆಗೊಳಿಸಿದ ರೀತಿ ವಿಶಿಷ್ಟವಾದದ್ದು.

ಒಂದು ಅಪ್ಪಟ ಭಾರತೀಯ ಕಾದಂಬರಿಯ ರೂಪದಲ್ಲಿ ನಿರಾಲಾ ಅವರ *ಕುರಿಗಾಹಿ ಬಿಲ್ಲೇಸುರ* ಅತ್ಯಂತ ವಿಶಿಷ್ಟ ಗದ್ಯಕೃತಿಯಾಗಿದೆ. ಇದರ ಮೊದಲ ಆವೃತ್ತಿಯ ಪೀಠಿಕೆಯಲ್ಲಿ ನಿರಾಲಾ ಅವರು ಇದನ್ನು 'ಒಂದು ಹಾಸ್ಯಮಯ ಸ್ಕೆಚ್'ಎಂದು ಕರೆದಿದ್ದಾರೆ. ಇದೇ ಸಂಕೇತದ ಆಧಾರದ ಮೇಲೆ ಬಹುಕಾಲ *ಕುರಿಗಾಹಿ ಬಿಲ್ಲೇಸುರ* ಒಂದು ರೇಖಾಚಿತ್ರಾತ್ಮಕ ಕಾದಂಬರಿಯೆಂದೇ ಪರಿಗಣಿಸಲ್ಪಟ್ಟಿದ್ದು ಆಶ್ಚರ್ಯವಲ್ಲ. ಆದರೆ ವಾಸ್ತವದಲ್ಲಿ ನಾಲ್ಕನೆಯ ದಶಕದ ಕೊನೆಗೆ ಅಥವಾ ಐದನೆಯ ದಶಕದ ಮೊದಲಲ್ಲಿ ರಚಿತವಾದ ಈ ಕಾದಂಬರಿಯು ಕಾದಂಬರಿ ಪ್ರಕಾರದ ಹೊಸ ಬಗೆಯ ಮುಕ್ತಿಯ ಭಾಸವನ್ನುಂಟುಮಾಡುತ್ತದೆ. ಗ್ರಾಮ್ಯ ಹಾಸ್ಯ-ವಿನೋದ ಹಾಗೂ ಸೃಜನಾತ್ಮಕ ಮುಖವಾಡದ ಸ್ವರೂಪವಿರುವ ಈ ಕಾದಂಬರಿಯು ಕಥಾನಾಯಕ ಬಿಲ್ಲೇಸುರನ ಜೀವನ ಸಂಘರ್ಷದ ಮರ್ಮವನ್ನು ಚಿತ್ರಿಸುತ್ತದೆ. ಜಾನಪದದ ರಂಗು ತುಂಬಿಕೊಂಡ ಕಾದಂಬರಿಯ ಕೊನೆ ಸುಖಾಂತವೇ ಆಗಿದ್ದರೂ ಇದು ನಿಜವಾದ ಅರ್ಥದಲ್ಲಿ ಕಥಾನಾಯಕನ ಬಾಳಿನಲ್ಲಿಯ ಹೋರಾಟದ ಚಿತ್ರಣವೇ ಆಗಿದೆ.

*ಕುರಿಗಾಹಿ ಬಿಲ್ಲೇಸುರ* 1942 ರಲ್ಲಿ ಪ್ರಕಟವಾಯಿತು. ಅದೇ ವರ್ಷ ನಿರಾಲಾ ಅವರ ನೀಳ್ಗವಿತೆ *ಕುಕುರಮುತ್ತಾ* ಪ್ರಕಟಗೊಂಡು ಅದಕ್ಕೆ ವಿರಹವನ್ನು ವಿಭಿನ್ನ ರೀತಿಯಲ್ಲಿ ಅಭಿವ್ಯಕ್ತಗೊಳಿಸುವ ಕಲಾಕೃತಿಯೆಂದು ಪ್ರಶಂಸೆ ದೊರೆಯಿತು. *ಕುರಿಗಾಹಿ ಬಿಲ್ಲೇಸುರ* ಕಾದಂಬರಿಯ ಎರಡು ಭಾಗಗಳು 1939 ರಲ್ಲಿ '*ರೂಪಾಭ*'ಪತ್ರಿಕೆಯಲ್ಲಿ ಪ್ರಕಟವಾಗಿದ್ದವು. ಈ ಮಹತ್ವಪೂರ್ಣ ಕಾದಂಬರಿಯ ಎರಡನೆಯ ಆವೃತ್ತಿ 1945 ರಲ್ಲಿ ಪ್ರಕಟವಾಯಿತು.

ಈ ಆವೃತ್ತಿಯ ಮುನ್ನುಡಿಯಲ್ಲಿ ನಿರಾಲಾ ಅವರು ಇದನ್ನು 'ಪ್ರಗತಿಶೀಲ ಸಾಹಿತ್ಯದ ಮಾದರಿ' ಎಂದು ಪರಿಗಣಿಸಿದರು. ಇದರ ತಂತ್ರದ ಬಗ್ಗೆ ನಿರಾಲಾ ಅವರು ಹೀಗೆ ಅಭಿಪ್ರಾಯಪಟ್ಟರು: "ಇಲ್ಲಿನ ಬಾಹ್ಯ ವರ್ಣನೆಯಲ್ಲಿಯೇ ಅಂತರಂಗದ ಚಿತ್ರಣವಿದ್ದು ಇದು ಪ್ರಗತಿಶೀಲ ಸಾಹಿತ್ಯದ ಮೊದಲ ಹೆಜ್ಜೆಯಾಗಿದೆ. ಕಲೆಯು ವಿಶಿಷ್ಟವಾಗಿದ್ದು ಮೂರು ವಿಭಿನ್ನ ಕತೆಗಳನ್ನು ಒಂದೇ ಎಳೆಯಲ್ಲಿ ಹೆಣೆಯಲಾಗಿದೆ. ಕೊನೆಯು ಕೊನೆಗೊಂಡರೂ ಮುಂದುವರಿದ ಹಾಗೆ ಇದೆ, ಓದುಗನಿಗೆ ದಿಗ್ಭ್ರಮೆ ಹುಟ್ಟಿಸುತ್ತದೆ, ಆದರೆ ಮನಸ್ಸು ಗಟ್ಟಿಗೊಂಡಂತೆ ಅನಿಸುತ್ತದೆ." ಈ ಕಾದಂಬರಿಯು 'ಒಂದು ಹಾಸ್ಯಮಯ ಸ್ಕೆಚ್' ಎಂದು ನಿರಾಲಾ ಅವರು ಹೇಳಿದ್ದು ಕಾದಂಬರಿಯ ಪ್ರಕಾರವನ್ನು ಕಡೆಗಣಿಸಿ ಅಲ್ಲ: ತಮ್ಮ ವರ್ಣನಾಶೈಲಿ, ಕಥಾನಿರೂಪಣೆ, ವಿಶ್ಲೇಷಣಾ ವಿಧಾನಗಳನ್ನು ಗಮನದಲ್ಲಿಟ್ಟುಕೊಂಡು ಹಾಗೆ ಹೇಳಿದರು. ಯಾವುದೇ ಪ್ರವಾಹದ ವಿರುದ್ಧ ಸತ್ಯದ ತಳಹದಿಯ ಮೇಲೆ ನಿಂತು ಹೊಸ ಬಗೆಯ ಜೀವನಚಿತ್ರಣವನ್ನು ಒಂದು ಕಾದಂಬರಿ ಕೊಟ್ಟಾಗಲೇ ಅದಕ್ಕೆ ಸಾಹಿತ್ಯಿಕ ಸಾಮರ್ಥ್ಯ ಸಿಗುವುದು ಹಾಗೂ ಸಮಾಜಕ್ಕೆ ಒಂದು ಜೀವರಸತುಂಬಿ ಹರಿಯುವ ಜೀವನದ ಅನುಭವ ಸಿಗುವುದು, ಎಂದು ನಿರಾಲಾ ಅವರ ಅಭಿಪ್ರಾಯವಾಗಿತ್ತು. ಈ ದೃಷ್ಟಿಯಿಂದ ಹಿಂದೀ ಕಾದಂಬರಿಯಲ್ಲಿ *ಕುರಿಗಾಹಿ ಬಿಲ್ಲೇಸುರ* ನಿಜವಾಗಿಯೂ ಒಂದು ಹೊಸ ಪ್ರಯೋಗವೆನಿಸುವುದು.

ಇದಕ್ಕಿಂತ ಮೊದಲು 1939 ರಲ್ಲಿ ನಿರಾಲಾ ಅವರ ಇನ್ನೊಂದು ಕಾದಂಬರಿ *ಕುಲ್ಲೀಭಾಟ* ಪ್ರಕಟವಾಗಿತ್ತು. ಈ ಎರಡೂ ಕೃತಿಗಳಲ್ಲಿ ಜಾನಪದ ಧಾಟಿಯ ಹಾಸ್ಯವಿನೋದಭಾವ ತುಂಬಿದೆ. ಕುಲ್ಲಿ ಮತ್ತು ಬಿಲ್ಲೇಸುರದಂಥ ಪಾತ್ರಗಳನ್ನು ನಿರಾಲಾ ಅವರು ತಮಗೆ ಚಿರಪರಿಚಿತವಾದ ಅವಧ ಪ್ರಾಂತದ ಸರಳವಾದ ಗ್ರಾಮೀಣ ಜೀವನದಿಂದ ಆಯ್ದುಕೊಂಡಿದ್ದರು. 'ಬಿಲ್ಲೇಶ್ವರ' ಎಂಬುದು 'ಬಿಲ್ಲೇಸುರ' ದ ವಿಕೃತಿರೂಪವಾಗಿದ್ದು 'ಕುರಿಗಾಹಿ' ಶಬ್ದವು ಉದ್ಯೋಗ ಅಥವಾ ಒಕ್ಕಲುತನದಿಂದ ಜೀವನ ನಡೆಯದಿದ್ದಾಗ ಜಾತಿಯಿಂದ ಬ್ರಾಹ್ಮಣನಾದ ಬಿಲ್ಲೇಸುರನು ಕುರಿಕಾಯುವಂತೆ ಆಯಿತು ಎಂಬುದರ ಸಂಕೇತವಾಗಿದೆ. ತನ್ನ ವೈಫಲ್ಯದ ಕಾರಣವನ್ನು ಕೂಡಲೇ ಕಂಡುಕೊಂಡ ಬಿಲ್ಲೇಸುರನು 'ಜೀವನೋಪಾಯಕ್ಕಾಗಿ ಈ ಜಗತ್ತಿನಲ್ಲಿ ಬ್ರಾಹ್ಮಣನು ನೇಗಿಲು ಸಹ ಹಿಡಿಯಬೇಕಾಗುತ್ತದೆ, ಚಪ್ಪಲಿ ಅಂಗಡಿ ತೆರೆಯಬೇಕಾಗುತ್ತದೆ, ಅಂದಮೇಲೆ ಕುರಿ ಕಾಯುವುದೇನು ಅಂಥ ಕೆಟ್ಟ ಕೆಲಸವಲ್ಲ, ಎಂದು ಸಮಾಧಾನ ಮಾಡಿಕೊಳ್ಳುತ್ತಾನೆ. ತಂದೆಯ ಸಾವಿನ ನಂತರ ಕುಟುಂಬವು ಒಡೆದು ಹೋದಾಗ ಬಿಲ್ಲೇಸುರ ಕಲ್ಕತ್ತೆಯ ದಾರಿ ಹಿಡಿಯುತ್ತಾನೆ. ಟಿಕೆಟ್ ತೆಗೆದುಕೊಳ್ಳದೆ ಟ್ರೈನಿನಲ್ಲಿ ಕೂರುತ್ತಾನೆ. ಅವನನ್ನು ದಾರಿಯಲ್ಲೇ ಇಳಿಸಿಬಿಡುತ್ತಾರೆ. ಆಗ ನಿರಾಲಾ ಬರೆಯುತ್ತಾರೆ, "ಹಿಂದೂಸ್ತಾನದ ಹವಾ ನೀರಿನ ಗುಣಕ್ಕೆ ತಕ್ಕಂತೆ ಬಿಲ್ಲೇಸುರರು ವಿನಯ-ಪೂರ್ವಕವಾಗಿಯೇ ಕಾಯಿದೆ ಉಲ್ಲಂಘಿಸುತ್ತಿದ್ದರು. ಏನೂ ಮಾತಾಡಲಿಲ್ಲ. ತೆಪ್ಪಗೆ ಇಳಿದುಬಿಟ್ಟರು. ಆದರೆ ತಮ್ಮ ಸಿದ್ಧಾಂತ ಬಿಡಲಿಲ್ಲ." ಕೊನೆಗೂ ಒಮ್ಮೆ ಸತ್ತೀದೀನ ಸುಕುಲನ ಮನೆಯನ್ನು ತಲುಪಿದರು. ಆತ ಬರದ್ವಾನದ ಮಹಾರಾಜರ ದರಬಾರಿನಲ್ಲಿ ಜಮಾದಾರನಾಗಿದ್ದ. ಸಂಬಂಧದಲ್ಲಿ ಬಿಲ್ಲೇಸುರರಿಗಿಂತ ಬಹಳ ಹಿರಿಯನಿದ್ದ. ಬಿಲ್ಲೇಸುರರಿಗೆ ಪತ್ರಗಳನ್ನು ಹಂಚುವ ಕೆಲಸ ಸಿಕ್ಕಿತು. ಬಿಲ್ಲೇಸುರರಿಂದ ಇನ್ನೂ ಹೆಚ್ಚಿನ ಕೆಲಸಗಳನ್ನು

ಮಾಡಿಸಿಕೊಳ್ಳುವ ಉದ್ದೇಶದಿಂದ ಸುಕುಲರ ಹೆಂಡತಿ ಮೊದಲಿನ ದನಗಾಹಿಯನ್ನು ಕೆಲಸದಿಂದ ತೆಗೆದುಹಾಕಿಬಿಟ್ಟಳು. ಬಿಲ್ಲೇಸುರರಿಗೆ ಆಘಾತವಾಯಿತು. ಕುರಿಕಾಯಲು ಅವರು ಸಮುದ್ರ ದಾಟಿ ಬಂದಿರಲಿಲ್ಲ. ಅವರ ಸ್ವಭಾವದಲ್ಲಿ ಒಂದು ವಿಶಿಷ್ಟ ದೃಢತೆ ಇತ್ತು. ಅದಮ್ಯ ಜೀವನಶಕ್ತಿಯಿತ್ತು. ನಿರಾಲಾ ಅವರ ಶಬ್ದಗಳಲ್ಲಿ ಹೇಳುವುದಾದರೆ- ''ಅವರೆಂದೂ ಏನೂ ಮಾತಾಡಲಿಲ್ಲ. ತಮ್ಮ ಬಾಳಿನ ಪುಟಗಳನ್ನು ತಾವೇ ಓದುತ್ತಾ ಸಾಗಿದ್ದರು. ಯಾವುದೇ ವಿಜ್ಞಾನಿಗಿಂತ ಮಿಗಿಲಾದ ನಾಸ್ತಿಕರಾಗಿದ್ದರು. ಏಕಾಂಗಿಯಾದ ಶೂರ ನಾವಿಕರಂತೆ ಶಕ್ತಿಯುತ ಹೋರಾಟ ಮಾಡುತ್ತ ಸಾಗಿದರು.''

ಒಂದು ಒಳ್ಳೆಯ ಕಾಯಂ ನೌಕರಿಗಾಗಿ, ಬಡತಿಗಾಗಿ ಬಿಲ್ಲೇಸುರರು ಏನೆಲ್ಲ ಮಾಡಿದರು. ಸುಳ್ಳಿಗೂ ಮೊರೆ ಹೊಕ್ಕರು. ಸಂತಾನಪ್ರಾಪ್ತಿಯ ಉದ್ದೇಶದಿಂದ ಸತ್ತ್ವಹೀನ ಸುಕುಲರು ತಮ್ಮ ಹೆಂಡತಿಯೊಂದಿಗೆ ಜಗನ್ನಾಥ ಸ್ವಾಮಿಯ ದರ್ಶನಕ್ಕೆ ಹೋದಾಗ ಒಂದು ಸುಳ್ಳು ಕನಸಿನ ನೆವದಿಂದ ಗುರುಮಂತ್ರವನ್ನೂ ಪಡೆದರು. ಈ ಮಂತ್ರದ ಬಲದಿಂದ ಸುಕುಲರ ಪತ್ನಿ ಗರ್ಭವತಿಯಾಗಲಿಲ್ಲ. ಆಗ ಅವರ ಸಂಕಷ್ಟ, ಆತಂಕ ಇನ್ನೂ ಹೆಚ್ಚಾದವು. ನಿರಾಲಾ ಬರೆಯುತ್ತಾರೆ, ''ಗುರುಪತ್ನಿಯ ಯಥಾರ್ಥವಾದವೂ ಬಿಲ್ಲೇಸುರರನ್ನು ಘಾಸಿ ಮಾಡಿತು. ಒಂದು ದಿನ ಕಂಠೀಹಾರವನ್ನು ಅವರ ಎದುರಿಗೆ ಎಸೆದು ಊರಿಗೆ ತಿರುಗಿಬಂದರು. ಊರಿನಲ್ಲಿ ಒಕ್ಕಲುತನ ಮಾಡಬೇಕೆಂದು ನಿರ್ಧರಿಸಿದರು. ಜೊತೆಗೇ ಕುರಿಗಳನ್ನು ಕೊಂಡು ತಂದರು. ಗುರು-ಮಂತ್ರವನ್ನಂತೂ ತ್ಯಜಿಸಿಬಿಟ್ಟಿದ್ದರು. ಆದರೆ ಕುರಿಗಳಿಗೆ ಒಳ್ಳೆಯದಾಗಲೆಂದು ಮಹಾವೀರಸ್ವಾಮಿಯ ಮೂರ್ತಿಯನ್ನು ಆರಾಧಿಸತೊಡಗಿದರು. ಈಗಾಗಲೇ ಸಾಕಷ್ಟು ಜೀವನಾನುಭವ ಗಳಿಸಿದ್ದ ಬಿಲ್ಲೇಸುರರು ಎಚ್ಚೆತ್ತುಕೊಂಡಿದ್ದರು. ಸದಾ ಮುಂದೆ ನೋಡಿಕೊಂಡು ನಡೆಯುತ್ತಿದ್ದರು. ನಿರಾಲಾ ಅವರ ಶಬ್ದಗಳಲ್ಲೇ ಹೇಳುವುದಾದರೆ- ''ನಮ್ಮ ಸಾಕ್ರೆಟಿಸ್ ಹೆಚ್ಚು ಮಾತನಾಡುತ್ತಿರಲಿಲ್ಲ. ಆದರೆ ಇವನ ಫಿಲಾಸಫಿಯೇನೂ ಕಡಿಮೆ ಮಟ್ಟದ್ದಾಗಿರಲಿಲ್ಲ, ಕೇವಲ ಇವನ ಮಾತು ಯಾರೂ ಕೇಳುತ್ತಿರಲಿಲ್ಲ ಅಷ್ಟೇ; ಇವನಿಗೂ ಮರವೆಯಿಂದ ಪಾರಾಗುವ ದಾರಿ ಕಾಣಲಿಲ್ಲ, ಆದ್ದರಿಂದ ಈತ ಅಲೆದಾಡುತ್ತಲೇ ಇದ್ದ.''

ಬಾಳಿನ ಹೋರಾಟದ ಈ ಎರಡನೆಯ ಘಟ್ಟದಲ್ಲಿ ಬಿಲ್ಲೇಸುರ ಊರಿಗೆ ಬಂದಾಗ ಅವರಿಗೆ ತಾವು ಯಾರೋ ವೈರಿಗಳ ಕೋಟೆಯಲ್ಲಿ ಇರಲು ಬಂದಂತೆ ಅನ್ನಿಸಿತು. ವಾಸಿಸಲು ಆಯ್ದುಕೊಂಡ ಮನೆಯ ವರ್ಣನೆ ಹೀಗಿದೆ-'ಮನೆಯ ಎದುರಿಗೆ ಒಂದು ಹಾಳು ಬಾವಿಯಿದೆ, ಒಂದು ಹುಣಸೆಮರವಿದೆ. ಮಳೆಯ ನೀರಿನಿಂದಾಗಿ ಗೋಡೆಗಳೊಳಗಿಂದಲೇ ಹರನಾಳಿಗೆಗಳು ಹೊರಬಂದಂತೆ ಕಾಣುತ್ತವೆ. ಅವರು ಕುರಿಗಳ ರಕ್ಷಣೆಯ ಭಾರವನ್ನು ಮಹಾವೀರಸ್ವಾಮಿಗೆ ಒಪ್ಪಿಸಿ ಕೆಲಸಕ್ಕೆ ಹೊರಡುತ್ತಿದ್ದರು. ಪ್ರಕೃತಿಯ ಸೌಂದರ್ಯ ಅವರ ಮನಸೂರೆಗೊಳ್ಳುತ್ತಿತ್ತು. ಪ್ರತಿಯೊಂದು ದೃಶ್ಯವನ್ನೂ ಅವರು ಆಸಕ್ತಿಯಿಂದ ನೋಡುತ್ತಿದ್ದರು. ''ಮೊದಲ ಮಳೆ ಆಗಷ್ಟೆ ಸುರಿದಿತ್ತು. ನೆಲವೆಲ್ಲ ಒದ್ದೆಯಾಗಿತ್ತು. ಹಳ್ಳ-ಕೊಳ್ಳ, ಕೆರೆ-ಬಾವಿಗಳು ಹೆಚ್ಚು-ಕಡಿಮೆ ತುಂಬಿಕೊಂಡಿದ್ದವು. ಹತ್ತಿ, ಭತ್ತ, ಜೋಳ, ಸಜ್ಜೆ, ಉದ್ದು, ತೊಗರಿ ಅಲಸಂದಿ, ಮೆಕ್ಕೆಜೋಳ ಇತ್ಯಾದಿಗಳನ್ನು ಬಿತ್ತಬಯಸಿದ ರೈತರು ಆಗಲೇ ಉಳತೊಡಗಿದ್ದರು. ಕೃಷಿ ತಂತ್ರದ ಮರ್ಮವನ್ನರಿತ ಬಿಲ್ಲೇಸುರರು ಮೊದಲ ಮಳೆಯ ಮಣ್ಣಿನ ವಾಸನೆಯಿಂದ

ರೋಮಾಂಚನಗೊಂಡು ತಮ್ಮದೇ ಗುಂಗಿನಲ್ಲಿ ಮುಳುಗಿ ಕುರಿಗಳನ್ನು ಹೊಡೆದುಕೊಂಡು ಹೊರಟಿದ್ದರು.'' ಕಬ್ಬು ಬೆಳೆಯಬೇಕೆಂಬ ಯೋಚನೆ ಮನಸ್ಸಿನಲ್ಲಿ ಮನೆಮಾಡಿಕೊಂಡಿತ್ತು. ತಿರುಗಿ ಬಂದಾಗ ನೋಡುತ್ತಾರೆ, ಮಹಾವೀರಸ್ವಾಮಿಯು ಉಸ್ತುವಾರಿಯಲ್ಲಿ ಬಿಟ್ಟುಹೋಗಿದ್ದ ಒಂದು ಕುರಿಯನ್ನು ಯಾರೋ ಸಾಯಿಸಿಬಿಟ್ಟಿದ್ದರು. ಅವರ ಪಾಲಿಗಂತೂ ಇದೊಂದು ಭಯಂಕರ ಆಘಾತದ ಅನುಭವ. ಜೀವನದ ಸಂದೇಶ ಮೃತ್ಯುವಿನ ಸಂಕೇತವಾಗಿ ಮಾರ್ಪಟ್ಟಂತೆ ಅನಿಸಿತು. ಜೀವನೋತ್ಸಾಹ ತುಂಬಿಕೊಂಡಿರುವಂತೆ ಕಾಣುತ್ತಿದ್ದ ದೃಶ್ಯವೇ ಈಗ ಸಂಕಟಮಯವಾದಂತೆ ಕಾಣತೊಡಗಿತು. ''ಜನರು ಹೊಲಗಳನ್ನು ಉತ್ತು ವಾಪಸು ಬರತೊಡಗಿದ್ದರು; ತಮ್ಮ ತಮ್ಮ ಮನೆಗಳ ಕೋರೆಹಲ್ಲುಗಳ ಒತ್ತಡದಲ್ಲಿ ಸಿಕ್ಕು ನುಣ್ಣಗಾಗಿ ಸಾಯಲಿಕ್ಕೋ ಎಂಬಂತೆ.'' ತೆಪ್ಪಗೆ ಮಹಾವೀರಸ್ವಾಮಿಯ ಮೂರ್ತಿಯ ಬಳಿ ಹೋಗಿ ನಿಂತು ಆವೇಶದಿಂದ ಮಾತಾಡುತ್ತ ಮೂರ್ತಿಯ ಕಪಾಳಕ್ಕೊಂದು ಏಟು ಬಿಗಿದರು, ''ನೋಡು, ನಾನು ಬಡವ. ನೀನು ಬಡವರ ಬಂಧು ಅಂತ ಎಲ್ಲರೂ ಅನ್ನುತ್ತಾರೆ. ಅದಕ್ಕೇ ನಾನು ನಿನ್ನ ಬಳಿ ಬಂದಿದ್ದೆ, ನನ್ನ ಕುರಿಗಳನ್ನೂ ಅವುಗಳ ಮರಿಗಳನ್ನು ನೋಡಿಕೋ ಅಂತ ಕೇಳಿಕೊಂಡಿದ್ದೆ. ಹೀಗೇನಾ ನೀನು ನೋಡಿಕೊಳ್ಳುವುದು? ಹೇಳು, ಹೀಗೇಕೆ ಮಳ್ಳನ ಹಾಗೆ ಮುಖ ಮಾಡಿಕೊಂಡು ನಿಂತಿರುವಿ?'' ಇದು ಬಿಲ್ಲೇಸುರರ ಮೂರ್ತಿಭಂಜಕ ವ್ಯಕ್ತಿತ್ವ. ಸಂಪೂರ್ಣ ನಂಬಿದ್ದ ಮೂರ್ತಿಯ ಬಗೆಗೆ ತಿರಸ್ಕಾರ. ವಿಮರ್ಶಕ ಡಾ. ರಾಮವಿಲಾಸ ಶರ್ಮರು *ಕುರಿಗಾಹಿ ಬಿಲ್ಲೇಸುರ* ಕಾದಂಬರಿಯು 'ರಾಮನ ಶಕ್ತಿಪೂಜೆಯ ವಿಡಂಬನೆ' ಎಂದು ಅಭಿಪ್ರಾಯಪಟ್ಟಿದ್ದಾರೆ.

ಕಥೆಯ ಮೂರನೆಯ ಹಾಗೂ ಕೊನೆಯ ಭಾಗದಲ್ಲಿ ಬಿಲ್ಲೇಸುರರು ಜೀವನದ ಮೇಲಿನ ತಮ್ಮ ಹಿಡಿತವನ್ನು ಬಿಗಿಗೊಳಿಸಿದಂತೆ, ಗಟ್ಟಿಗೊಳಿಸಿದಂತೆ ಅನಿಸುತ್ತದೆ. ''ದುಃಖವನ್ನು ಪದೇಪದೇ ಎದುರಿಸಿ ಹಲವು ಬಾರಿ ಅದಕ್ಕೆ ಮುಖಾಮುಖಿಯಾಗಿ ಸವಾಲೊಡ್ಡಿದ್ದರು. ಎಂದೂ ಸೋಲೊಪ್ಪಲಿಲ್ಲ.'' ಒಮ್ಮೆ ಖೋವಾ ತಯಾರು ಮಾಡುವರು, ಮತ್ತೊಮ್ಮೆ ಗುದ್ದಲಿ ಹಿಡಿದು ಹೊಲದಲ್ಲಿ ಕೆಲಸ ಮಾಡುವರು. ಈ ಧೈರ್ಯ-ಸಾಹಸಗಳಿಂದಾಗಿಯೇ ಜೀವನ ಒಂದು ಘಟ್ಟಕ್ಕೆ ಬಂದು ತಲುಪಿತ್ತು. ಈ ಸಂದರ್ಭದಲ್ಲಿ ಮದುವೆಯ ಯೋಚನೆ ಬಂದಿತು. ಯಾವುದಾದರೂ ಪ್ರಸ್ತಾಪ ಬಂದಾಗ ಮೈಯಲ್ಲಿ ಮಿಂಚು ಹರಿದಂತಾಗುತ್ತಿತ್ತು. ಈ ಬಗ್ಗೆ ಹಿತೈಷಿಗಳ ಎದುರು ತೋಡಿಕೊಂಡರು. ಒಳಗೊಳಗೆ ಏನೋ ಅಂಜಿಕೆ. ಒಂದೆಡೆ 'ಹುಡುಗಿಯ ರೂಪದ ಮೋಹ ಆವರಿಸಿತ್ತು. ನೂರಾರು ಮೊಗ್ಗುಗಳು ಅರಳತೊಡಗಿದ್ದವು. ಸುವಾಸನೆ ಸುತ್ತೆಲ್ಲ ಹರಡತೊಡಗಿತ್ತು. ಅದು ಹೇಗೋ ದೊಡ್ಡಣ್ಣ ಮನ್ನಿಯ ಅತ್ತೆಗೆ ಹತ್ತಿರವಾದರು. ಆಕೆ ತಮ್ಮ ಮದುವೆ ಗೊತ್ತುಮಾಡುವಳೆಂದು ನಂಬಿ ನಿಶ್ಚಿಂತರಾದರು. ಖುಶಿಯಾಗಿದ್ದರು. ಕಬ್ಬು ಬೆಳೆಯುತ್ತಿರುವುದನ್ನು ನೋಡುತ್ತಿದ್ದಂತೆ ಇನ್ನೂ ಖುಶಿಯಾದರು. ಪ್ರಕೃತಿಯೂ ಹೊಸ ಬಣ್ಣ ತಳೆದಂತೆ ಅನಿಸುತ್ತಿತ್ತು. ''ಕಾರ್ತಿಕದ ಬೆಳೆದಿಂಗಳು ಹರಡಿತ್ತು. ನಸುಕೆಂಪು ಛಾಯೆಯ ಮಂಜು ಬೀಳತೊಡಗಿತ್ತು. ಎಲ್ಲೆಲ್ಲಿಂದಲೋ ಬಂದ ಹಕ್ಕಿಗಳು ಹುಣಸೆಯ ಮರಗಳಲ್ಲಿ ಗೂಡು ಕಟ್ಟತೊಡಗಿದ್ದವು, ಅವುಗಳ ಕಲರವ ಸುತ್ತೆಲ್ಲ ತುಂಬಿತ್ತು.'' ಅತ್ಯಂತ ಕಷ್ಟದ ಸಮಯದಲ್ಲೂ ಬಿಲ್ಲೇಸುರರ ಜೀವನಾಸಕ್ತಿ ಕುಂದಿರಲಿಲ್ಲ. ಪ್ರಕೃತಿಯ ಬಗೆಗಿನ ಅವರ

ಪ್ರೀತಿ ಸದಾ ಜಾಗೃತವೂ ಗಾಢವೂ ಆಗಿರುತ್ತಿತ್ತು. ನಿರಾಲಾ ಬರೆಯುತ್ತಾರೆ, "ರಾತ್ರಿ ಬಿಲ್ಲೇಸುರರು ಅಟ್ಟದ ಕಟ್ಟೆಯ ಮೇಲೆ ಕೂತು ನೋಡುತ್ತಿದ್ದರು. ಮೊದಲು ಅಲ್ಲಿ ಕೂತು ಆಕಾಶದಲ್ಲಿ ಚಿಗರೆಗಳನ್ನು ನೋಡುತ್ತಿದ್ದರು. ಈಗ ಹೊಸದೊಂದು ಭವಿಷ್ಯದ ಕಡೆಗೆ ನೋಡುವರು. ಕೃಷಿ ಕೆಲಸದಲ್ಲಿ ಅಭಿರುಚಿ ಉಂಟಾಗತೊಡಗಿತ್ತು. ಕಬ್ಬಿನ ಗದ್ದೆಯಲ್ಲಿ ಒಮ್ಮೆ ಬಟಾಣಿ ಬಿತ್ತುವರು, ಒಮ್ಮೆ ಸೇಂಗಾ ಬಿತ್ತುವರು. ಅವರ ಬಳಿ ಬಂಗಾರದ ಇಟ್ಟಿಗೆಯೂ ಇದೆ ಎಂಬ ಗಾದೆಮಾತನ್ನು ಅವರೆಂದೂ ಅಲ್ಲಗಳೆಯಲು ಪ್ರಯತ್ನಿಸಲಿಲ್ಲ."

ಕಾದಂಬರಿಯ ಕೊನೆಯಲ್ಲಿ ನಿರಾಲಾ ಅವರ ವಿನೋದ ಪ್ರವೃತ್ತಿ ಮೆರೆದಿದೆ. ಥೇಟು ಜಾನಪದ ಧಾಟಿಯ ಜೀವಂತ ವಿನೋದ. ಕೆಲಸದಲ್ಲಿ ತೊಡಗಿದ ಬಿಲ್ಲೇಸುರರಿಗೆ ಮನ್ನಿಯ ಅತ್ತೆಯ ಆಶ್ವಾಸನೆ ನೆನಪಾದಾಗ ಮನಸ್ಸು ಎತ್ತೆತ್ತಲೋ ಓಡುವುದು. "ಮದುವೆಯ ಬಳ್ಳಿಗೆ ಮೊಗ್ಗು ಮೂಡಲಾರಂಭಿಸಿದಂತೆ ಅನಿಸುವುದು; ಉಸಿರು ತಡೆ-ತಡೆದು ಹೊರ ಹೊಮ್ಮುವುದು, ಕೂದಲು ನಿಮಿರಿ ನಿಲ್ಲುವುದು" ಆತ್ಮ ಸಮ್ಮೋಹಿನಿಗೊಳಗಾಗದಂತೆ ಪೂಜೆಯ ಸಮಯದಲ್ಲೂ ಕನ್ನಡಿ ನೋಡಿಕೊಳ್ಳುವರು, "ಕಣ್ಣು ಹಾಗೂ ಹುಬ್ಬುಗಳನ್ನು ಮೇಲೇರಿಸಿ, ಕೆಳಗಿಳಿಸಿ, ಕೆನ್ನೆ ಉಬ್ಬಿಸಿ, ಒಳಸೇರಿಸಿ, ತುಟಿ ಅಗಲಿಸಿ, ಕೂಡಿಸಿ." ಮನೆಯಿಂದ ಹೊರಗೆ ಹೊರಟೊಡನೆ ಶುಭ ಸಂಕೇತಗಳು ಎದುರಾಗುವುವು-ತುಂಬಿದ ಕೊಡಗಳು. ಕೊಡ ಹೊತ್ತಾಕೆ ತಮಾಷೆ ಮಾಡುತ್ತಿದ್ದಳು, "ಇನ್ನು ನೀವು ಸಿಹಿ ಹಂಚುವುದು ಯಾವಾಗ?" ಪ್ರಕೃತಿಯ ಸಾಮಾನ್ಯ ರೂಪಗಳೇ ಹೊಸ ರಂಗು ಧರಿಸುತ್ತಿದ್ದವು. ನಿರಾಲಾ ಪ್ರಕೃತಿಯನ್ನೂ ಬಿಲ್ಲೇಸುರರ ಮನಸ್ಸಿನ ಗತಿಯನ್ನೂ ಒಟ್ಟಿಗೇ ಗಮನಿಸುತ್ತಾರೆ. "ಬಿಲ್ಲೇಸುರರು ಹಾಗೆಯೇ ಮುಂದೆ ಸಾಗಿದರು. ಅವರು ಶಮಶೇರಗಂಜದ ಹೊರವಲಯ ತಲುಪಿದರು. ಒಂದು ಕಡೆ ಈಚಲು ಹಾಗೂ ತಾಳೆ ಮರಗಳು ಕಂಡವು. ಎದುರಿಗೆ ಹಸಿರು ತುಂಬಿದ ಹೊಲ. ಇಬ್ಬನಿ ಮತ್ತು ಸೂರ್ಯ ಕಿರಣಗಳ ಕಾಂತಿ ಪಸರಿಸಿತ್ತು. ಕಣ್ಣುಗಳೆದುರು ಹಲವು ಬಣ್ಣಗಳು ಕುಣಿಯುತ್ತಿದ್ದವು. ಹೃದಯದಲ್ಲೇನೋ ಕಚಗುಳಿಯಿಟ್ಟ ಅನುಭವ. ಹೆಜ್ಜೆಗಳನ್ನು ಬೇಗಬೇಗನೆ ಇಡತೊಡಗಿದರು." ಮುಂದೆ ಹೋದಂತೆ ಮಾವು ಮತ್ತು ಮಹುಆ ಮರಗಳು ಸಾಲುಸಾಲಾಗಿ ಕಂಡುಬಂದವು. ಚಳಿಗಾಲದ ಬಂಗಾರ ಬಣ್ಣದ ಬಿಸಿಲು. ನಿರಾಲಾರ ಶಬ್ದಗಳಲ್ಲಿ ಹೇಳುವುದಾದರೆ- "ಇಡಿಯ ಜಗತ್ತೇ ಬಂಗಾರದ್ದೆನಿಸುತ್ತಿತ್ತು. ಬಡತನದ ಛಾಯೆ ಎಲ್ಲೂ ಇರಲಿಲ್ಲ." ಆಗ ಬಿಲ್ಲೇಸುರರ ಮನಸ್ಸು ಗಾಳಿಯ ಹಗುರವಾದ ತೆರೆಗಳಗುಂಟ ತೇಲಿಹೋಗುವುದು. ಮದುವೆ ನಿಶ್ಚಯಿಸಿಕೊಂಡು ಊರಿಗೆ ಮರಳಿದಾಗ ಬಿಲ್ಲೇಸುರರಿಗೆ ಕೋಟೆಯೊಂದನ್ನು ಜಯಿಸಿದ ಅನುಭವ. ಪಲ್ಲಕ್ಕಿ ಹೊರುವವರು, ಹಜಾಮ, ಮೋಚಿ, ಕಮ್ಮಾರ, ಚೌಕೀದಾರ, ಎಲ್ಲರೂ ಅವರೆಡೆ ಬರತೊಡಗಿದರು. ನೆರೆಯ ಜಮೀನುದಾರ ಠಾಕೂರರು ದಿಬ್ಬಣಕ್ಕಾಗಿ ತಮ್ಮ ಕುದುರೆಯನ್ನು ಕೊಡಮಾಡಿದಾಗ ಬಿಲ್ಲೇಸುರರು ಸ್ವಾಭಿಮಾನವಶರಾಗಿ ಹೇಳಿದರು, "ನಾನು ಬಡ ಬ್ರಾಹ್ಮಣ, ಬ್ರಾಹ್ಮಣನ ಹಾಗೆಯೇ ಹೋಗುತ್ತೇನೆ." ಕಾದಂಬರಿಯ ಕೊನೆಯ ವಾಕ್ಯವಿದು: "ನಾಲ್ಕು ದಿನಗಳ ನಂತರ ಬಿಲ್ಲೇಸುರರು ಮದುಮಗಳನ್ನು ಕರೆದುಕೊಂಡು ಮನೆಗೆ ಮರಳಿ ಬಂದರು. ನಂತರ ತಾವು ಸಿರಿವಂತರಾದ ರಹಸ್ಯವನ್ನು ಜೀವಮಾನವಿಡೀ ಬಿಟ್ಟುಕೊಡಲಿಲ್ಲ." ತಾತ್ಪರ್ಯವೆಂದರೆ

ಅವರು ತುಂಬ ಸ್ಥೈರ್ಯದಿಂದ ಜೀವನ ನಡೆಸಬೇಕಾಗಿತ್ತು. ಸಿರಿವಂತರಾದ ರಹಸ್ಯ ಕೇವಲ ರಹಸ್ಯವಾಗಿತ್ತು. ಕಾದಂಬರಿಯು ಹೀಗೆ ತೀರ ಸಾಮಾನ್ಯ ರೀತಿಯಲ್ಲಿ ಕೊನೆಗೊಂಡದ್ದು ಓದುಗನ ದೃಷ್ಟಿಯಿಂದ ಅಚ್ಚರಿಯ ವಿಷಯವೆನಿಸಬಹುದು, ಏಕೆಂದರೆ ಕಥಾನಾಯಕ ಬಿಲ್ಲೇಸುರರ ಹೋರಾಟ ಇನ್ನೂ ಅಪೂರ್ಣವಾಗಿಯೇ ಇತ್ತು, ಬಹುಶಃ ಇದಕ್ಕಿಂತ ಭಿನ್ನವಾದದ್ದು ಅವರ ಜೀವನದಲ್ಲಿ ಬೇರೇನೂ ಘಟಿಸುವಂತಿರಲಿಲ್ಲ. ಇಂತಹ ಕೊನೆಯೇ ಗಟ್ಟಿಮುಟ್ಟಾದ ಕೊನೆಯೆಂದು ಅನಿಸುವುದು. ಬಿಲ್ಲೇಸುರರ ನಿಜಜೀವನದಲ್ಲಿಯೂ ಹೀಗೆಯೇ ಅತ್ಯಂತ ಕಷ್ಟಕರ ಹಾಗೂ ಭಯಾನಕ ಸಂದರ್ಭಗಳು ಸಹ ಅವರ ಜೀವನಶಕ್ತಿಯನ್ನು ಕಳೆಗುಂದಿಸಲು ಸಾಧ್ಯವಾಗಿರಲಿಲ್ಲ. ವಿಶಿಷ್ಟತೆ ಅಥವಾ ಮಹಾನತೆ ಇತ್ಯಾದಿಗಳ ಕಲ್ಪನೆಯ ಆಚೆ ಹೋಗಿ ಸಾಧಾರಣತೆ ಅಥ್ವಾ ಸರಳತೆಯ ಅರ್ಥದಲ್ಲಿ ಬಿಲ್ಲೇಸುರರು ನಾಯಕರೆನಿಸುತ್ತಾರೆ. ಬೇರೆಯವರನ್ನು ಕಂಡು ನಗುವವರು ಬಹಳ ಜನ ಇದ್ದಾರು. ಬಿಲ್ಲೇಸುರರು ತಮ್ಮನ್ನು ಕಂಡು ತಾವೇ ನಗುವ ಸಾಮರ್ಥ್ಯವುಳ್ಳವರು. ವಯಸ್ಸಾದಂತೆ ಮದುವೆಯ ಬಗ್ಗೆ ತಮಗನಿಸುವ ಉತ್ಕಟ ಆಸೆ-ಆಕಾಂಕ್ಷೆಯ ಬಗ್ಗೆ ನಗುತ್ತಾರೆ. ಬಂಗಾರದ ಇಟ್ಟಿಗೆಗೆ ಸಂಬಂಧಿಸಿದಂತೆ ತಮ್ಮ ಬಗ್ಗೆ ಪ್ರಚಲಿತವಿದ್ದ ಸುಳ್ಳು ಸುದ್ದಿಗಾಗಿಯೂ ನಗುತ್ತಾರೆ. ನಿರಾಲಾ ಅವರ ವ್ಯಂಗ್ಯದ ಮೂಲಕ ಯಥಾರ್ಥವಾದವು *ಕುರಿಗಾಹಿ ಬಿಲ್ಲೇಸುರ* ಕಾದಂಬರಿಯಲ್ಲಿ ಹಾಸ್ಯವಿನೋದದ ಜೊತೆಗೇ ದುರಂತದ ಛಾಯೆಯನ್ನೂ ಒಳಗೊಂಡು ವಿಶಿಷ್ಟ ರೂಪ ತಾಳಿದೆ.

ಜಾನಕೀ ವಲ್ಲಭ ಶಾಸ್ತ್ರಿಗಳಿಗೆ *ಕುಲ್ಲೀಭಾಟ* ಕೃತಿಯ ಬಗ್ಗೆ ನಿರಾಲಾ ಅವರು ಪತ್ರ ಬರೆದ್ದಿದರು- "ಅಂತೂ ಮಾಡುತ್ತ ಕೆಡಿಸುತ್ತ ಏನೋ ಸಿದ್ಧವಾಗಿದೆ." ಅವರಿಗೇ ಎರಡನೆಯ ಪತ್ರದಲ್ಲಿ ಮತ್ತೆ ಬರೆದರು- "*ಚಮೇಲಿಯ* ನಂತರ *ಕುರಿಗಾಹಿ ಬಿಲ್ಲೇಸುರ ರೂಪಾಭಿ* ಪತ್ರಿಕೆಯಲ್ಲಿ ಬರುವುದು. ಇದೇ ಸಂಚಿಕೆಯಲ್ಲಿ ಓದಿರಿ. ಇದೊಂದು ಹೆಚ್ಚಿನ ವೈಶಿಷ್ಟ್ಯ ಹೊಂದಿದ ಕೃತಿ." 1939 ರಿಂದ 1941 ರ ವರೆಗೆ ನಿರಾಲಾ ಅವರು *ಚಮೇಲಿ* ಹಾಗೂ *ಕುರಿಗಾಹಿ ಬಿಲ್ಲೇಸುರ* ಕೃತಿಗಳನ್ನು ಪೂರ್ಣಗೊಳಿಸುವುದರಲ್ಲಿ ಮಗ್ನರಾಗಿದ್ದರು. *ಚಮೇಲಿ* ಅಪೂರ್ಣವಾಗಿ ಉಳಿಯಿತು. ಆದರೆ *ಕುರಿಗಾಹಿ ಬಿಲ್ಲೇಸುರ* ಯಥಾರ್ಥವಾದಿ ಕಾದಂಬರಿ ಪ್ರಕಾರದಲ್ಲಿ ಒಂದು ಹೊಸ ಪರಂಪರೆಯನ್ನೇ ಸೃಷ್ಟಿಸಿತು. ಬಹಿರಂಗದ ಚಿತ್ರಣದ ಈ ಪ್ರಣಾಲಿ ಅವರ *ಕಾಲೇ ಕಾರನಾಮೇ* ಕೃತಿಯಲ್ಲಿ ಹೊಸದೊಂದು ರೂಪ ತಾಳಿತು. ಇಲ್ಲಿಯೂ ಪ್ರಕೃತಿ ಪರಿವೀಕ್ಷಣೆ ಇದೆ, ಹಾಗೂ ಪರಿಸ್ಥಿತಿಜನ್ಯ ಸಂಕಷ್ಟಗಳ ಅದೇ ಅನುಭೂತಿ ಇದೆ. *ಕುಲ್ಲೀಭಾಟದಲ್ಲಿ* ನಿರಾಲಾ ಅವರು ಕುಲ್ಲಿಯ ಜೀವನಚರಿತ್ರೆ ಬರೆಯುತ್ತ ತಾವೇ ಕಥೆಯ ಒಂದು ಪಾತ್ರವಾಗಿಬಿಡುತ್ತಾರೆ. ಹಾಗೆ ನೋಡಿದರೆ *ಕುರಿಗಾಹಿ ಬಿಲ್ಲೇಸುರ* ಜೀವನ ಚರಿತ್ರೆಯಲ್ಲ, ಇಲ್ಲಿ ನಿರಾಲಾ ಅವರು ಪಾತ್ರವಾಗಿಯೂ ಇಲ್ಲ. ಬಿಲ್ಲೇಸುರರ ಜೀವನದ ಕೆಲವೇ ಘಟನೆಗಳನ್ನು ಇಲ್ಲಿ ಚಿತ್ರಿಸಲಾಗಿದ್ದು ಅದರೊಂದಿಗೆ ಮೂರು ಕತೆಗಳನ್ನು ಹೆಣೆಯಲಾಗಿದೆ. ಆದರೆ ಇಲ್ಲಿ ಎಲ್ಲಕ್ಕಿಂತ ಮುಖ್ಯವಾದದ್ದು ಕಥಾ ನಾಯಕನ ಆಳವಾದ ಜೀವನಾಸಕ್ತಿಯ ಚಿತ್ರಣ ಹಾಗೂ ಜಾನಪದ ಲೋಕದ ಹಿನ್ನೆಲೆಯಲ್ಲಿ ಮನುಷ್ಯ ಸ್ವಭಾವದ ವಸ್ತುನಿಷ್ಠ ದರ್ಶನ. ಈ ಕಾದಂಬರಿಯ ವಿಶಿಷ್ಟ ಗದ್ಯದಲ್ಲಿ ನಿಬಂಧ, ವ್ಯಕ್ತಿಚಿತ್ರ, ಸಂಸ್ಮರಣ,

ಜೀವನಚರಿತ್ರೆ-ಇತ್ಯಾದಿ ಅನೇಕ ರೂಪಗಳು ಒಳಗೊಂಡಿವೆ. ಹಿಂದೀ ಕಾದಂಬರಿ ಚರಿತ್ರೆಯಲ್ಲಿ ಒಂದು ಕಾಲಕ್ಕೆ ಮಹತ್ವದ್ದೆನಿಸಿದ್ದ ಆದರ್ಶವಾದ ಹಾಗೂ ಸುಧಾರಣಾವಾದಗಳ ಬಗ್ಗೆ ಸಂದೇಹ ಮೂಡಿಸುವಂಥ ಅಪರೂಪದ ಕೃತಿ ಈ ಕಾದಂಬರಿ. ನಿರಾಲಾ ಅವರ ದೃಷ್ಟಿಯಲ್ಲಿ ಈ ನೇರವಾದ ಆದರ್ಶವಾದವು ಯುಗಪ್ರವರ್ತನೆಯ ಅಭಿವ್ಯಕ್ತಿಯ ದಾರಿಗೆ ಅಡ್ಡಗಲ್ಲು ಆಗುತ್ತದೆ. ಹೊಸ ಬಗೆಯ ಕಾದಂಬರಿಯ ಸ್ವರೂಪದ ಹುಡುಕಾಟದಲ್ಲಿ ನಿರಾಲಾ ಒಬ್ಬ ಯುದ್ಧಾಸಕ್ತ ಯೋಧನ ಪರಿಕಲ್ಪನೆಗೆ ಮಹತ್ವ ನೀಡುತ್ತಾರೆ. ಅವರೆನ್ನುತ್ತಾರೆ, "ರಾಜಕಾರಣ ಕ್ಷೇತ್ರದಲ್ಲಿ, ಹೋರಾಟದ ಪ್ರಸಂಗಗಳಲ್ಲಿ ತಲೆಯೆತ್ತಿ ನಿಲ್ಲುವ ಅವಶ್ಯಕತೆ ಇರುವ ಹಾಗೆ ಸಾಹಿತ್ಯ ಕ್ಷೇತ್ರದಲ್ಲಿಯೂ ದನಿಯೆತ್ತಬೇಕಾಗುತ್ತದೆ. ಈ ತರದ ಹೋರಾಟಗಳು ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ, ತುಂಬ ವಿರಳವಾದುದರಿಂದಲೇ ಕಾದಂಬರಿ ಪ್ರಕಾರಕ್ಕೆ ಈ ಗತಿ ಬಂದಿದೆ." (ಸಂಪಾದಿಕೀಯ, ಸುಧಾ ಮಾಸಿಕ ಪತ್ರಿಕೆ, ಲಖನೌ, ಆಗಸ್ಟ್ 1930). ಸ್ವತಃ ತಮ್ಮ ಕಾದಂಬರಿಯಲ್ಲಿಯೇ ಈ ತೆರದ ವೈಶಿಷ್ಟ್ಯವನ್ನು ತರಲು ನಿರಾಲಾ ಅವರಿಗೆ ಒಂದು ದಶಕವೇ ಬೇಕಾಯಿತು. ಸಾಮಾನ್ಯವೆಂದು ಅನಿಸುವ ಬಿಲ್ಲೇಸುರರ ಜೀವನ ಸಂಘರ್ಷದಲ್ಲಿ ಇಂಥ ಹೋರಾಟದ ಕೆಚ್ಚು ಇದೆ; ಪ್ರಚ್ಛನ್ನ ರೂಪದಲ್ಲಾದರೂ ಸರಿಯೇ. ಮಹಾವೀರಸ್ವಾಮಿಯ ಪ್ರತಿಮೆಯಲ್ಲಿ ಅಪಾರ ಭರವಸೆಯನ್ನಿಟ್ಟುಕೊಂಡು ಆ ಭರವಸೆ ನುಚ್ಚುನೂರಾದಾಗ ಅದೇ ಪ್ರತಿಮೆಯ ಮೇಲೆ ಪ್ರಹಾರ ಮಾಡಿದ್ದು ಸಾಮಾನ್ಯ ಘಟನೆಯಲ್ಲ. ಇಂದು ಈ ಘಟನೆಯ ಒಳಗೆ ಅಡಗಿದ ಅರ್ಥ ಇನ್ನೂ ಆಳವೆನಿಸುತ್ತದೆ, ಸಾಂಕೇತಿಕವೆನಿಸುತ್ತದೆ. ಹಿಂದಿ ಕಾದಂಬರಿಯ ಹಳೆಯ ಸ್ವರೂಪವನ್ನು ಧಿಕ್ಕರಿಸಿ ಹೊಸಹಾದಿ ತುಳಿದ ಈ ಕಾದಂಬರಿಯು ಹಿಂದಿಯ ಅಪ್ಪಟ ಪ್ರಾದೇಶಿಕ ಅನುಭವಗಳನ್ನೊಳಗೊಂಡಿದೆ. ಈ ಅರ್ಥದಲ್ಲಿ ಈ ಕೃತಿಗೆ ಹೊಸದೊಂದು ಯುಗಕ್ಕೆ ನಾಂದಿ ಹಾಡಿದ ಶ್ರೇಯಸ್ಸು ಸಲ್ಲುತ್ತದೆ.

-ಪರಮಾನಂದ್ ಶ್ರೀವಾಸ್ತವ

# ಒಂದು

ಬಹಳಷ್ಟು ಶೋಧನೆಯ ನಂತರ ತಿಳಿದು ಬಂದದ್ದೇನೆಂದರೆ 'ಬಿಲ್ಲೇಸುರ' ಹೆಸರಿನ ಶುದ್ಧ ರೂಪವು 'ಬಿಲ್ಲೇಶ್ವರ' ಎಂದಿದೆ, ಎಂಬುದು. ಇದು ಪುರವಾ ಡಿವ್ಹಿಜನ್ ಪ್ರದೇಶದ ಹೆಸರು, ಅಲ್ಲಿ ಬಿಲ್ಲೇಸುರ ಶಬ್ದವು ಬಹಳ ಜನಪ್ರಿಯ. ಯಾಕೆಂದರೆ ಪುರವಾದಲ್ಲಿ ಈ ಹೆಸರಿನ ಪ್ರತಿಷ್ಠಿತ ಶಿವನಿದ್ದಾನೆ. ಬೇರೆಡೆ ಈ ಹೆಸರು ಎಲ್ಲೂ ದೊರೆಯುವುದಿಲ್ಲ, ಆದ್ದರಿಂದ ಭಾಷಾಶಾಸ್ತ್ರದ ದೃಷ್ಟಿಯಿಂದ ಇದಕ್ಕೆ ಮಹತ್ವವಿದೆ. ಅಲ್ಲಿ 'ಕುರಿಗಾಹಿ' ಶಬ್ದಕ್ಕೆ ಪೂರಕವಾಗಿ 'ಕುರಿಗಾಯಿ' ಶಬ್ದವನ್ನುಪಯೋಗಿಸುತ್ತಾರೆ. ನಾನು ಇದಕ್ಕೆ ಹಿಂದೂಸ್ತಾನೀ ರೂಪ ಕೊಟ್ಟಿದ್ದೇನೆ. 'ಗಾಹಿ'ಯ ಪ್ರಯೋಗವು 'ಸಾಕುವವನು' ಎಂಬರ್ಥದಲ್ಲಿದೆ, 'ಕೊಲ್ಲುವವನು' ಎಂಬರ್ಥದಲ್ಲಿ ಸರ್ವಥಾ ಅಲ್ಲ.

ಬಿಲ್ಲೇಸುರನು ಜಾತಿಯಿಂದ ಬ್ರಾಹ್ಮಣನು, ಘಟ್ಟದಲ್ಲಿಯ ಸತ್ಕುಲಪ್ರಸೂತನು; ಡೇರೆಯವನ ಮಗ ಡೇರೆಯವನೇ ಆಗುವ ಹಾಗೆ ಯಾವನೋ ಕುರುಬರವನ ಮಗನಾದ ಕುರಿಗಾಹಿಯಲ್ಲ ಈತ. ಆದರೆ ಘಟ್ಟದ ಈ ಸತ್ಕುಲಪ್ರಸೂತ ಬ್ರಾಹ್ಮಣನಿಗೆ ಈ ಸಂಸಾರವನ್ನು ನಿಭಾಯಿಸುವ ಬೇರಾವುದೇ ಮಾರ್ಗ ದೊರೆಯದಂತಾಗಲು ಕುರಿಗಳನ್ನು ಸಾಕುವ ಕೆಲಸ ಮಾಡತೊಡಗಿದನು. ಆಗ ಊರಿನವರು ಈ ಹೆಸರಿನಿಂದ ಅವನನ್ನು ಕರೆಯತೊಡಗಿದರು.

ಹಿಂದಿಯ ಭಾಷಾಸಾಹಿತ್ಯದಲ್ಲಿ ರಸದ ಅಭಾವವೇನೋ ಇದೆ, ಆದರೆ ಹಿಂದಿಯನ್ನು ಮಾತಾಡುವವರಲ್ಲೇನೂ ರಸದ ಕೊರತೆಯಿಲ್ಲ; ಅವರ ಜೀವನನದಲ್ಲಿ ರಸದ ಗಂಗೆ-ಯಮುನೆಯರೇ ಹರಿಯುತ್ತಾರೆ; ಇಪ್ಪತ್ತನೇ ಶತಮಾನದ ಸಾಹಿತ್ಯದ ಪ್ರವಾಹಗಳೆಲ್ಲ ಅವರ ಸಾಂಪ್ರದಾಯಿಕ ಜೀವನದಲ್ಲಿ ಕಾಣಸಿಗುತ್ತವೆ. ಉದಾಹರಣೆಗಾಗಿ, ಬಿಲ್ಲೇಸುರನ ಮನೆತನವೊಂದೇ ಸಾಕು. ಬಿಲ್ಲೇಸುರನ ನಾಲ್ಕು ಜನ ಸೋದರರು ಕೂಡಿದರೆ ಆಧುನಿಕ ಸಾಹಿತ್ಯದ ನಾಲ್ಕು ಭಾಗಗಳು ಪೂರ್ತಿಯಾಗುತ್ತವೆ.

ಬಿಲ್ಲೇಸುರನ ತಂದೆಯ ಹೆಸರು ಮುಕ್ತಾಪ್ರಸಾದ ಎಂದಿತ್ತು; ಅದೇಕೆ ಇಷ್ಟು ಶುದ್ಧ ಹೆಸರಿತ್ತೋ ತಿಳಿಯದು; ಅವರೇನೂ ಪಂಡಿತರಾಗಿರಲಿಲ್ಲ. ಮುಕ್ತಾಪ್ರಸಾದರಿಗೆ ನಾಲ್ಕು ಗಂಡುಮಕ್ಕಳಾದವು-ಮನ್ನಿ, ಲಲಯಿಾ, ಬಿಲ್ಲೇಸುರ, ದುಲಾರೆ. ಅವರು ಸ್ವತಃ ಹೆಸರಿಟ್ಟರು, ಆದರಿವು ಶುದ್ಧ ಹೆಸರುಗಳು. ಅವರನ್ನು ಕರೆಯುವ ಹೆಸರುಗಳು ಅವರವರ ಸ್ವಭಾವಾನುಸಾರವಾಗಿ ಬೇರೆಯವೇ ಆಗಿದ್ದವು. ಮನ್ನಿ ಹುಟ್ಟಿ ವರ್ಷ ತುಂಬಿದಾಗ, ಮಗು ತಲೆಯೆತ್ತಿ ದಿಟ್ಟಿಸುವ ಬಗೆಯನ್ನು ಗಮನಿಸಿದ ತಂದೆ ಅವನನ್ನು 'ಹರಟೆಮಲ್ಲಣ್ಣ' ಎಂದು ಕರೆದರು. ಎರಡನೆಯ ಮಗ ಲಲಯಿಾ ತುಂಬ ಗೌರವರ್ಣದ ಮಗು. ಅಳುವಾಗ ಆ ಗೌರವರ್ಣ ಕೆಂಪಾಗಿ ಮಾರ್ಪಟ್ಟು ಇನ್ನೂ ಎದ್ದು ಕಾಣುತ್ತಿತ್ತು. ಕಣ್ಣುಗಳೂ ಕಂಜಲೋಚನ,

ಸ್ವಭಾವವೂ ವಿಭಿನ್ನ, ಹೀಗಾಗಿ ತಂದೆ ಅವನನ್ನು 'ಕೆಂಪಣ್ಣ' ಎಂದು ಕರೆದರು, ಪ್ರೀತಿಯಿಂದ 'ಕೆಂಪೂ' ಎಂದರು. ಬಿಲ್ಲೇಸುರನ ಹೆಸರಿನಲ್ಲೇ ಅರ್ಥವಿತ್ತು; ತಂದೆ 'ಬಿಲುವಾ', ಪ್ರೀತಿಯಿಂದ 'ಬಿಲ್ಲೂ' ಎಂದು ಕರೆದರು. ದುಲಾರೆಯು ದೇವರಿಂದ ಈಚೆ ಬರುವಾಗಲೇ ಸುಂತಿ ಮಾಡಿಸಿಕೊಂಡು ಬಂದಿದ್ದ, ಆತನಿಗೆ ಹೆಸರಿಡುವುದು ತಂದೆಗೆ ಸುಲಭವಾಯಿತು, 'ಕಟ್ಟೇಣ್ಣ' ಎಂದು ಕರೆಯತೊಡಗಿದರು, ಪ್ರೀತಿಯಿಂದ 'ಕಟ್ಟೂ' ಎಂದರು.

ದುರ್ದೈವದಿಂದ ಗಂಡು ಮಕ್ಕಳ 'ಏಳಿಗೆಯನ್ನು' ನೋಡುವ ಮೊದಲೇ ಮುಕ್ತಾಪ್ರಸಾದರು ಸಂಸಾರ ಬಂಧನದಿಂದ ಮುಕ್ತರಾದರು. ಅವರ ಹೆಂಡತಿ ಎಲ್ಲವನ್ನೂ ಸಂಭಾಳಿಸುತ್ತಿದ್ದಳು. ಆದರೆ ಆಕೆಯೂ ಬೀಸುತ್ತ, ಹಿಟ್ಟು ನಾದುತ್ತ, ಸಾರಿಸುತ್ತ, ಗುಡಿಸುತ್ತ ಕುಳ್ಳು-ತಟ್ಟುತ್ತ, ಚಿಕ್ಕದಾದ ತೋಟದಲ್ಲಿ ಮಾವು ಮಧೂಕಗಳನ್ನು ಬೆಳೆಯಿಸುತ್ತ, ಮಕ್ಕಳನ್ನು ಒಕ್ಕಲುತನದ ಕೆಲಸಕ್ಕೆ ಹಚ್ಚಿ ತಾನು ಈಶ್ವರನ ಸನ್ನಿಧಾನಕ್ಕೆ ಹೊರಟುಹೋದಳು. ಆಕೆ ಹೋದನಂತರ ನಾಲ್ಕೂ ಜನ ಅಣ್ಣತಮ್ಮಂದಿರಲ್ಲಿ ಒಮ್ಮತ ಉಳಿಯಲಿಲ್ಲ. ಭಿನ್ನಾಭಿಪ್ರಾಯಗಳಿದ್ದಾಗ ಸಹಜವಾಗಿ ಕೆಲಸದಲ್ಲಿ ಅಡೆತಡೆಯುಂಟಾಗುತ್ತವೆ. ನಾಲ್ಕು ಅಣ್ಣತಮ್ಮಂದಿರಲ್ಲಿ ಎರಡು ಪಾರ್ಟಿಗಳಾದವು. ಮನ್ನಿ ಮತ್ತು ಬಿಲ್ಲೇಸುರ ಒಂದೆಡೆ, ಲಲಯಿ ಮತ್ತು ದುಲಾರೆ ಇನ್ನೊಂದೆಡೆ, ಸನಾತನಧರ್ಮ ಹಾಗೂ ಆರ್ಯಸಮಾಜಗಳ ಪ್ರತಿನಿಧಿಗಳೋ ಎಂಬಂತೆ. ಕೆಲದಿನ ಹೀಗೇ ನಡೆಯಿತು. ಮುಂದೆ ಅವರಲ್ಲೂ ಬಿಸಿಲುಗಳೊಡೆದವು-ವೈಷ್ಣವ ಮತ್ತು ಶಾಕ್ತರ ಹಾಗೆ, ವೈದಿಕರು ಹಾಗೂ ವಿತಂಡವಾದಿಗಳ ಹಾಗೆ. ಮುಂದೆ ಒಬ್ಬೊಬ್ಬರದೂ ಅವರವರದ್ದೇ ಡೊಳ್ಳು ಹಾಗೂ ಅವರದೇ ರಾಗ ಎಂಬಂತಾಯಿತು.

ಘಟ್ಟದ ಬ್ರಾಹ್ಮಣನಾದ್ದರಿಂದ ಯಾರೂ ತಮ್ಮ ಕನ್ಯೆಯನ್ನು ಲಗ್ನ ಮಾಡಿ ಕೊಡುವುದಿಲ್ಲೆಂದು ಅರಿವಾದ ಸನಾತನಧರ್ಮಿಯಾದ ಮನ್ನಿಗೆ ಬಹಳ ದುಃಖವಾಯಿತು. ಲಗ್ನವಂತೂ ಅತ್ಯವಶ್ಯ. ಈ ಲೋಕಕ್ಕಾಗಿ ಹಾಗೂ ಪರಲೋಕಕ್ಕಾಗಿ ಸಹ. ತಾಯಿ-ತಂದೆಯಂತೂ ತೀರಿಹೋಗಿದ್ದಾರೆ, ನೀರೇನೋ ಅವರಿಗೆ ಸಿಗುತ್ತದೆ, ಆದರೆ ತಾಯಿ ಮಾಡುತ್ತಿದ್ದಂತಹ ಪರೋಟ ಸಿಗುವುದಿಲ್ಲ. ಗೃಹಿಣಿಯಿಲ್ಲದ ಮನೆಯಲ್ಲಿ ದೆವ್ವಗಳು ಬಿಡಾರ ಮಾಡುತ್ತವಂತೆ. ಯೋಗ್ಯವಾದ ಕಡೆ ಮನ್ನಿ ಮಾತುಕತೆ ಆಡುತ್ತಿದ್ದರು, ಎಲ್ಲಾದರೂ ಅನಾಥ ಹುಡುಗಿ ಕಂಡರೆ ಗಾಳ ಹಾಕಲು ಪ್ರಯತ್ನಿಸುತ್ತಿದ್ದರು. ಒಂದು ಕಡೆ ಗುರಿ ತಲುಪಿದ ಹಾಗಾಯಿತು. ಇಂತಹ ಮದುವೆಗಳಲ್ಲಿ ಉತ್ಪ್ರೇಕ್ಷೆಯೇ ಮುಖ್ಯವೆಂದು ಹೇಳುವುದೇನೂ ಬೇಕಾಗಿಲ್ಲ. ಆದರೆ ಬಹುಪಾಲು ಎಲ್ಲ ಸುಳ್ಳೇ, ಒಂದು ದುಡ್ಡಿನಷ್ಟಿದ್ದರೆ ಒಂದು ಲಕ್ಷದಷ್ಟಿದೆಯೆಂದು ಹೇಳಲಾಗುತ್ತದೆ. ಮನ್ನಿಯ ಮದುವೆಯ ವಿಷಯದಲ್ಲೂ ಹೀಗೆಯೇ ಆಯಿತು. ಹುಡುಗಿ ಆಗಷ್ಟೇ ತಾಯಿ ಹಾಲು ಕುಡಿಯುವುದನ್ನು ಬಿಟ್ಟಿದ್ದಳು. ತಾಯಿ ವಿಧವೆ, ಹುಡುಗಿಯನ್ನು ಇನ್ನೂ ಹತ್ತು ವರ್ಷ ಆಕೆ ಉಣಿಸಿ, ತಿನಿಸಿ ಬೆಳೆಸಬೇಕಲ್ಲ, ಹೀಗಿದ್ದಾಗ ನೂರಿನ್ನೂರು ರೂಪಾಯಿ ತಗೊಂಡು ಏನು ಮಾಡುವಿ, ಅಲ್ಲೇ ನೀನೂ ಬಂದಿರು, ಹಾಲು-ತುಪ್ಪ ಉಣ್ಣು, ರಾಣಿಯ ಹಾಗಿದ್ದುಕೊಂಡು ನಿನ್ನ ಮಗಳನ್ನು ದೊಡ್ಡವಳನ್ನಾಗಿ ಮಾಡು-ಎಂದೆಲ್ಲ ಆಕೆಗೆ ಹೇಳಲಾಯಿತು. ಈ ಮಾತು ಆ ತಾಯಿಗೆ ಒಪ್ಪಿಗೆಯಾಯಿತು. ಆಗ ಮನ್ನಿಗೆ ಮೂವತ್ತು ವರ್ಷ ವಯಸ್ಸಾಗಿತ್ತು. ಆದರೆ ಗಿಡ್ಡ ಆಕೃತಿಯಾದುದರಿಂದ ಹದಿನೆಂಟು-

ಹತ್ತೊಂಬತ್ತೆಂದು ಹೇಳಲಾಯಿತು. ಹಾಗೆ ಮೀಸೆಯೇನೂ ಹೆಚ್ಚು ಬೆಳೆದಿರಲಿಲ್ಲ. ಮಾತು ಕುದುರಿತು.

ಮನ್ನಿಯ ಹೊಲದ ಹತ್ತಿರ ಒಂದು ತೋಪು ಇದೆ; ಅಲ್ಲಿ ರಘುಂಡವೇಶ್ವರ ದೇವರಿದ್ದಾನೆಂದು ಹೇಳುತ್ತಾರೆ. ಒಂದು ಸಂಜೆ ಮನ್ನಿ ಧೂಪ-ದೀಪ, ಅಕ್ಷತೆ-ಗಂಧ, ನೀರು, ಹಣ್ಣು-ಹಾಲು ತೆಗೆದುಕೊಂಡು ಅಲ್ಲಿಗೆ ಹೋಗಿ ಮಂಡಿಯೂರಿ ಕೂತು ಏನೇನೋ ಹೇಳಿಕೊಳ್ಳುತ್ತ ಪೂಜೆ ಮಾಡತೊಡಗಿದರು. ಹಿಂದಿರುಗಿ ಬಂದು ಪ್ರಸಾದ ಸೇವಿಸಿ ಮಲಗಿಕೊಂಡರು, ನಂತರ ಇನ್ನೂ ರಾತ್ರಿ ಇರುವಾಗಲೇ ಎದ್ದು ಪುರವಾಕ್ಕೆ ಹೊರಟರು. ಒಂದು ವಾರದ ನಂತರ ತಲೆಗೆ ಪೇಟ ಸುತ್ತಿಕೊಂಡು, ಒಬ್ಬ ವಿಧವೆ ಹಾಗೂ ಆಕೆಯ ಮಗಳನ್ನು ಕರೆದುಕೊಂಡು ಹಿಂದಿರುಗಿ ಬಂದರು. ದಾರಿಯಲ್ಲಿ ಜಮೀನ್ದಾರನ ಹೊಲದಲ್ಲಿ ರಾಶಿಯಾಗಿತ್ತು, ಅದನ್ನು ತೋರಿಸಿ ಇದೆಲ್ಲಾ ನನ್ನದೇ ಬೆಳೆ-ಅಂದರು. ಅತ್ತೆಯಾದಾಕೆ ಪ್ರಯಾಸಪಟ್ಟು ಆನಂದಾತಿರೇಕವನ್ನು ತಡೆದುಕೊಂಡಳು. ಇನ್ನಷ್ಟು ಮುಂದೆ ಸಾಗಿದಾಗ ಊರ ಹೊರಗಿನ ತೋಟಗಳು ಕಂಡವು. ಮನ್ನಿ ಶ್ರೀಮಂತ ದೊಡ್ಡ ಮನುಷ್ಯನೆಂಬುದರಲ್ಲಿ ಅತ್ತೆಗೆ ಸಂದೇಹವುಳಿಯಲಿಲ್ಲ. ಮನೆ ಮುರಿದುಬಿದ್ದಿತ್ತು. ಅಣ್ಣತಮ್ಮಂದಿರಿಂದ ಬೇರೆಯಾಗಿ ಒಂದು ಮುರುಕು ಮನೆಯಲ್ಲಿ ಇರುತ್ತಿದ್ದರು; ಆದರೆ ವಾಗ್ದೇವಿಯ ಪ್ರಚಂಡ ವರವಿತ್ತು. ಮುರುಕು ಮನೆಯನ್ನೂ ಅದು ಅರಳಿಸಿತು. ಅಲ್ಲಿ ತಲುಪುವ ಮೊದಲೇ ದಾರಿಯಲ್ಲಿ ಜಮೀನ್ದಾರನ ವಾಡೆಯನ್ನು ತೋರಿಸಿ-ಇದೇ ನಮ್ಮ ಮೂಲ ಮನೆ, ಇಲ್ಲಿ ಅಣ್ಣತಮ್ಮಂದಿರಿದ್ದಾರೆ, ನಿಮ್ಮನ್ನು ಏಕಾಂತವಾದ ಸ್ಥಳಕ್ಕೆ ಕರೆದೊಯ್ಯುತ್ತೇನೆ-ಅಂದರು. ಅಲ್ಲಿ ನಿಮಗೆ ಆರಾಮ ಸಿಗುವುದು, ಇಲ್ಲಿದ್ದರೆ ನಿಮಗೆ ತಕ್ಕ ಮರ್ಯಾದೆ ಸಿಗಲಿಕ್ಕಿಲ್ಲ, ನಂತರ ಅದನ್ನೇ ವಾಡೆಯನ್ನಾಗಿ ಬದಲಿಸಿಕೊಳ್ಳೋಣ-ಅಂದರು. ಅತ್ತೆಯವರು ವಿನಯದಿಂದ ಹೇಳಿದರು-ಸರಿ ತಮ್ಮಾ, ಹಾಗೇ ಆಗಲಿ, ಹೊರಗಿನ ಜನರೊಂದಿಗೆ ಇರುವುದು ಸರಿಯಾಗಲಿಕ್ಕಿಲ್ಲ. ಮನ್ನಿ ಅವರನ್ನು ಮುರುಕು ಮನೆಗೆ ಕರೆದೊಯ್ದರು. ಆ ದಿನ ಐದು ಸೇರು ಹಾಲು ತಂದರು. ಅತ್ತೆ ಲಜ್ಜೆಯಿಂದ-ಅಯ್ಯೋ, ಇಷ್ಟೊಂದು ಹಾಲು ಯಾರು ಕುಡಿದಾರು, ಅಂದರು. ಮನ್ನಿ ಗಂಭೀರರಾಗಿ ಹೇಳಿದರು- ಅಟ್ಟಿಸಿದ ನಂತರ ಸ್ವಲ್ಪವೇ ಉಳಿಯುತ್ತದೆ, ನಾವು ಮೂವರಿದ್ದೇವಲ್ಲ, ಇದೇನೂ ಹೆಚ್ಚಲ್ಲ. ಈಗಲೇ ಒಂದಿಷ್ಟು ಹಾಲು-ಸಕ್ಕರೆ ಬೆರೆಸಿ ಶರಬತ್ತಿನ ಬದಲಿಗೆ ಕುಡಿದರಾಯಿತು. ಅತ್ತೆ ಹಾಯಾಗಿ ಉಸಿರಾಡಿದರು. ಮನ್ನಿ ಭಾಂಗ್ ಸಾಣಿಸುತ್ತಿದ್ದರು. ಠಾಕೂರರ ಮನೆ ಹತ್ತಿರ ಒಂದು ದೊಡ್ಡ ಮುದ್ದೆಯನ್ನು ಅರೆದು ತಯಾರಿಸಿ ಮೆತ್ತಗೆ ಮನೆಗೆ ತಂದರು. ಹಾಲಿಗೆ ಸಕ್ಕರೆ ಬೆರೆಸಿ ಆ ಮುದ್ದೆಯನ್ನು ಅದಕ್ಕೆ ಸೇರಿಸಿ ಕರಗಿಸಿದರು. ಭಾಂಗ್‌ನಲ್ಲಿ ಬಾದಾಮಿಯ ಪ್ರಮಾಣ ಸಾಕಷ್ಟಿತ್ತು, ಅತ್ತೆಯವರಿಗೆ ಅಮೃತವನ್ನೇ ಕುಡಿದಂತೆನಿಸಿತು, ಒಂದೇ ಗುಟುಕಿಗೆ ಮುಗಿಸಿದರು. ಮನ್ನಿ ಒಂದಿಷ್ಟನ್ನು ತಮ್ಮ ಭಾವೀ ಪತ್ನಿಗೆ ಕುಡಿಸಿ, ನಂತರ ತಾವೂ ಕುಡಿದರು. ಅತ್ತೆ ಕೈಕಾಲು ತೊಳೆದುಕೊಂಡು ಕೂತರು, ಮನ್ನಿ ಪೂರಿಗಳನ್ನು ಮಾಡಿ ಮುಗಿಸಿದರು. ಪೂರಿ-ತರಕಾರಿ, ಹಾಲು-ಸಕ್ಕರೆ, ಸಿಹಿ-ಖಾರ ಎಲ್ಲವನ್ನೂ ಆದರದಿಂದ ಅತ್ತೆಗೆ ಬಡಿಸಿದರು. ಮನ್ನಿ ಮಂಚದ ಮೇಲೆ ಹಾಸಿಗೆ ಸಿದ್ಧಪಡಿಸಿದ್ದರು, ತಾಯಿ-ಮಗಳು ಮಲಗಿದರು. ಮನ್ನಿ ಊಟ ಮುಗಿಸಿ ದೇವರ ನಾಮಸ್ಮರಣೆ ಮಾಡತೊಡಗಿದರು. ಅರ್ಧ

ರಾತ್ರಿ ಕಳೆದಾಗ ಗಟ್ಟಿಯಾಗಿ ಕ್ಯಾಕರಿಸಿದರು, ಆದರೆ ಅತ್ತೆಗೆ ಎಚ್ಚರವಿರಲಿಲ್ಲ, ನಂತರ ಬಾಗಿಲನ್ನು ಧಪ-ಧಪ ಬಡಿದರು, ಆದರೂ ಆಕೆ ಮಗ್ಗುಲು ಸಹ ಬದಲಿಸಲಿಲ್ಲ. ಬೆಳಗಾಗುವ ಮೊದಲು ಆಕೆ ಕಣ್ತೆರೆಯಲಾರಳೆಂದು ಮನ್ನಿಗೆ ಗೊತ್ತಾಯಿತು. ಸರಿ, ತನ್ನ ಭಾವೀ ಪತ್ನಿಯನ್ನೆತ್ತಿ ಎದೆಗವಚಿಕೊಂಡು ಭಗವಾನ ಬುದ್ಧನ ಹಾಗೆ ಮನೆಬಿಟ್ಟು ಹೊರಟು ಬಿಟ್ಟರು. ಅತ್ತೆ ಮಲಗಿಯೇ ಇದ್ದಳು. ಬೆಳಗಾಗುವ ಹೊತ್ತಿಗೆ ಮನ್ನಿ ಏಳು ಹರಿದಾರಿಗಳಷ್ಟು ದೂರ ಸಾಗಿ ಬಂದಿದ್ದರು. ಅತ್ತೆ ಬೆಳಗಾಗೆದ್ದು ರಂಪ ಮಾಡಿದ್ದರು. ಸುದ್ದಿ ಹಬ್ಬಿತು. ಆದರೆ ಹಕ್ಕಿ ಹಾರಿ ಹೋಗಿತ್ತು. ಆಕೆ ಎದೆಬಡಿದುಕೊಂಡು ಅಳುತ್ತ, ನೀನು ಹಾಳಾಗು, ನಿನ್ನ ಮನೆ ನೀರು ಪಾಲಾಗಲಿ, ಅಂತೆಲ್ಲಾ ಶಪಿಸುತ್ತ, ತನ್ನೂರಿಗೆ ಹೊರಟು ಹೋದಳು. ಮನ್ನಿ ಒಂದು ಶುಭದಿನ ನೋಡಿಕೊಂಡು ಸದ್ದಿಲ್ಲದೆ ಲಗ್ನವಾಗಿ ಹೆಂಡತಿಯನ್ನು ಕರೆದುಕೊಂಡು ದೂರದ ಊರಿಗೆ ಹೊರಟು ಹೋದರು. ಹತ್ತು-ಹನ್ನೆರಡು ವರ್ಷ ಹೆಂಡತಿಯ ಸೇವೆ ಮಾಡಿದರು. ನಂತರ ಧರ್ಮವನ್ನು ಪರಿಪಾಲಿಸುತ್ತ, ಆಕೆ ಇಪ್ಪತ್ತು ವರ್ಷದವಳಾದಾಗ, ಆಕೆಯ ತಾಯಿಯ ಉಡಿಯಲ್ಲಿ ಒಬ್ಬ ಕನ್ಯೆಯನ್ನು ಹಾಕಿ ಆಕೆಯನ್ನು ಬಿಟ್ಟು ಸ್ವರ್ಗ ಸೇರಿದರು. ಮನ್ನಿ ಕಟ್ಟಾ ಸನಾತನಧರ್ಮಿಯಾಗಿದ್ದರು.

ಲಲಯಿಯಾಯ ಕತೆಯೇ ಬೇರೆ. ಮೊದಲಲ್ಲಿ ಇವರೂ ಕೆಲ ದಿನ ಕಲಕತ್ತೆ-ಮುಂಬಯಿಯ ಧೂಳು ಝಾಡಿಸುತ್ತ ತಿರುಗಿದರು, ಕೊನೆಗೆ ರತ್ಲಾಮ್‌ಗೆ ಬಂದು ಬೀಡುಬಿಟ್ಟರು. ಅಲ್ಲೊಬ್ಬ ವ್ಯಕ್ತಿಯೊಂದಿಗೆ ಗೆಳೆತನವಾಯಿತು. ಆತ ಗುಜರಾತಿ ಬ್ರಾಹ್ಮಣನಿದ್ದನೆಂದು ಸುದ್ದಿ. ದೇವರಿಚ್ಛೆ, ಕೆಲದಿನಗಳ ನಂತರ ಆ ಗೆಳೆಯ ಶಾಶ್ವತವಾಗಿ ಕಣ್ಣುಮುಚ್ಚಿಬಿಟ್ಟ. ಬೇರೆ ಉಪಾಯ ಕಾಣದೆ ಗೆಳೆಯನ ಸಂಸಾರದ ಪೂರ್ಣ ಭಾರವನ್ನು ಲಲಯಿಯಾ ಹೊತ್ತರು. ಆ ಗೆಳೆಯನಿಗೆ ಕುಟುಂಬವಿತ್ತು. ಹೆಂಡತಿ, ಇಬ್ಬರು ಗಂಡು ಮಕ್ಕಳು, ದೊಡ್ಡ ಮಗನ ಹೆಂಡತಿ. ಈ ಎಲ್ಲರೊಂದಿಗೆ ಆ ಗೆಳೆಯನ ಸಂಬಂಧ ಹೇಗಿತ್ತೋ ಏನಿತ್ತೋ ಲಲಯಿಯಾಗೂ ಅದೇ ರೀತಿಯ ಸಂಬಂಧ ಬೆಳೆಯಿತು. ಆ ಕುಟುಂಬದವರಿಗೆ ಒಂದಿಷ್ಟು ಆಸ್ತಿಯೂ ಇತ್ತು, ಆದ್ದರಿಂದ ಬಿಟ್ಟು ಎಲ್ಲಾದರೂ ದೂರ ಹೋಗುವ ಬದಲು ತಮ್ಮದೇ ಊರಲ್ಲಿರುವುದು ಒಳ್ಳೆಯದೆಂದು ಲಲಯಿಯಾಗೆ ಅನಿಸಿತು. ತಮ್ಮ ಧರ್ಮ-ಕರ್ಮಾದಿಗಳಲ್ಲಿ ದೃಢಮನಸ್ಕರಿದ್ದುದರಿಂದ ಲೋಕನಿಂದೆಯನ್ನು ಮತ್ತು ಯಶೋಗಾಥೆಯನ್ನು ಸಮಾನವೆಂದು ಪರಿಗಣಿಸ ಬಲ್ಲವರಾಗಿದ್ದರು. ಹೀಗಾಗಿ ಅವರೆಲ್ಲರನ್ನೂ ಊರಿಗೆ ಕರೆತಂದರು. ಒಂದೇ ಸಲಕ್ಕೆ ಹೆಂಡತಿ, ಎರಡೆರಡು ಗಂಡು ಮಕ್ಕಳು, ಒಬ್ಬ ಸೊಸೆ ಇವರನ್ನೆಲ್ಲ ನೋಡಿ ಜನ ಚಕಿತರಾದರು. ಇಂತಹ ಚಮತ್ಕಾರವನ್ನು ಅವರು ಹಿಂದೆಂದೂ ನೋಡಿರಲಿಲ್ಲ. ಎಲ್ಲೂ ಕೇಳಿಯೂ ಇರಲಿಲ್ಲ. ಲಲಯಿಯಾಗೆ ಮೊದಲೇ ಗೊತ್ತಿತ್ತು, ಊರವರ ಕಣ್ಣು ಯಾರ ಮೇಲೆ ಬೀಳುತ್ತದೋ ಅವರಿಗೆ ಬೇಗನೆ ಬಿಡುಗಡೆ ಆಗಲಾರದು, ಆದ್ದರಿಂದ ಅವರು ಆಸೆ ಬಿಟ್ಟೇ ಬಂದಿದ್ದರು. ಊರಿನವರು ಲಲಯಿಯಾಯ ಎಲೆ-ನೀರುಗಳ ಸಂಬಂಧವನ್ನು ತಕ್ಷಣ ನಿಲ್ಲಿಸಿದರು. ಲಲಯಿಯಾಗೆ ಒಳ್ಳೆಯದೇ ಆಯಿತು, ಖರ್ಚು ಉಳಿಯಿತು ಎನಿಸಿತು. ಊರಿನವರೆಂದುಕೊಂಡರು, ಈತ ನಮ್ಮನ್ನೇ ಮೂರ್ಖರನ್ನಾಗಿ ಮಾಡುತ್ತಿದ್ದಾನೆ, ಎಷ್ಟು ಆಸ್ತಿ ತಂದಿದ್ದಾನೆ, ಅದರಲ್ಲಿ ಒಂದಿಷ್ಟೂ ಖರ್ಚು ಆಗಗೊಡಲಿಲ್ಲವಲ್ಲ. ಅವರು ಅವಕಾಶಕ್ಕಾಗಿ ಕಾಯುತ್ತಿದ್ದರು. ಇದೇ ಸಮಯಕ್ಕೆ ಚಳವಳಿ

ಸುರುವಾಯಿತು. ಲಲಯಿಾ ದೇಶದ ಉದ್ಧಾರ ಕಾರ್ಯದಲ್ಲಿ ತೊಡಗಿದರು. ಹಿರಿಯ ಮಗ ಗುಜರಾತ್‌ನಲ್ಲಿ ಎಲ್ಲೋ ಕೆಲಸದಲ್ಲಿದ್ದ, ಹಣ ಕಳಿಸುತ್ತಲಿದ್ದ. ಊರಿನವರ ಮೇಲೆ ಸರಿಯಾದ ಪರಿಣಾಮವಾಯಿತು. ಲಲಯಿಾಯ ಪ್ರಾಬಲ್ಯದೆದುರು ಅವರ ಅಸಹಕಾರ ನಿಲ್ಲಲಿಲ್ಲ. ಈಗ ಮತ್ತೆ ಒಂದಾಗುವ ಮಾತಾಡುತ್ತಿದ್ದಾರೆ. ಲಲಯಿಾ ರಾಜಕಾರಣಿಯೂ ಸಮಾಜ ಸುಧಾರಕನೂ ಆಗಿದ್ದಾರೆ.

ಬಿಲ್ಲೇಸುರರ ಬಗ್ಗೆ ಮುಂದೆ ಹೇಳಲಾಗುವುದು. ಇವರಲ್ಲಿ ಬಿಲ ಹಾಗೂ ಈಶ್ವರ ಎರಡೂ ಭಾವಗಳು ಜೊತೆಜೊತೆಯಾಗಿದ್ದವು.

ದುಲಾರೆ ಆರ್ಯಸಮಾಜದ ಅನುಯಾಯಿಯಾಗಿದ್ದರು. ಬಸ್ತೀದೀನ ಶುಕ್ಲರು ಐವತ್ತರ ವಯಸ್ಸಿನಲ್ಲಿ ಒಬ್ಬ ವಿಧವೆಯನ್ನು ಕರೆತಂದಿದ್ದರು. ಹಾಗೆ ಕರೆತಂದ ವರ್ಷವೇ ಅವರು ತೀರಿಕೊಂಡರು. ದುಲಾರೆ ಆ ವಿಧವೆಗೆ ತಿಳಿಹೇಳಿದರು, ಗಂಡ ಜೀವಿಸಿದ್ದಾಗಲೂ ಮೂರು ವರ್ಷ ಅಥವಾ ಮೂರು ತಿಂಗಳುಗಳವರೆಗೆ ಆತನ ಸಮಾಚಾರ ತಿಳಿಯದಿದ್ದರೆ ಬೇರೊಬ್ಬ ಗಂಡನನ್ನು ಆಯ್ದುಕೊಳ್ಳುವ ಅಧಿಕಾರ ಹೆಂಡತಿಗೆ ಇದೆ. ಈಗಂತೂ ಬಸ್ತೀದೀನರು ಸತ್ತೇ ಹೋಗಿರುವರೆಂದ ಬಳಿಕ ಮೂರನೆಯ ಗಂಡನನ್ನು ಹೊಂದಲು ಆಕೆಗೆ ಪೂರ್ಣ ಸ್ವಾತಂತ್ರ್ಯವಿದೆ, ಮತ್ತು ಎಲ್ಲಾ ರೀತಿಯಿಂದ ಆಕೆಯ ಸೇವೆ ಮಾಡಲು ದುಲಾರೆ ಸಿದ್ಧವಿದ್ದಾರೆ, ಸ್ತ್ರೀಗೆ ಒಂದು ಆಧಾರ ಬೇಕು. ಆಕೆ ಒಪ್ಪಿದಳು. ಆದರೆ ದುಲಾರೆಯೂ ಒಂದೇ ವರ್ಷದಲ್ಲಿ ಸಂಸಾರವನ್ನು ತ್ಯಜಿಸಿ ಪರಲೋಕವನ್ನೈದಿದರು. ಹೆಂಡತಿಗೆ ಬಸಿರು ನಿಂತಿತ್ತು, ಮಗ ಹುಟ್ಟಿದ. ಈಗ ಆತ ನಾರದನ ಹಾಗೆ ಲಲಯಿಾಯ ಮನೆಬಾಗಿಲಲ್ಲಿ ಕೂತು ಆಡುತ್ತಿರುತ್ತಾನೆ. ಆತನ ತಾಯಿಯೂ ಉಳಿಯಲಿಲ್ಲ.

## ಎರಡು

ಮನ್ನಿ ದಾರಿ ತೋರಿಸಿ ಹೋಗಿದ್ದರು, ಬಿಲ್ಲೇಸುರರು ಹಿಂದೆ-ಹಿಂದೆಯೇ ಸಾಗಿದರು. ಊರಲ್ಲಿ ಅವರು ಕೇಳಿದ್ದರು, ಬಂಗಾಳದಲ್ಲಿ ಗಳಿಸಿದ ಹಣ ಉಳಿಯುತ್ತದೆ, ಮುಂಬಯಿಯಲ್ಲಿ ಉಳಿಯುವುದಿಲ್ಲ. ಆದ್ದರಿಂದ ಅವರು ಬಂಗಾಳದ ಕಡೆ ಕಣ್ಣು ಹೊರಳಿಸಿದರು. ಹತ್ತಿರದ ಊರುಗಳ ಕೆಲ ಜನರು ಬರದ್ವಾನದ ಮಹಾರಾಜರ ಬಳಿ ಸೈನಿಕರಾಗಿ, ಆರ್ಡರ್ಲಿಯಾಗಿ, ಜಮಾದಾರರಾಗಿ ಕೆಲಸ ಮಾಡುತ್ತಿದ್ದರು. ಬಿಲ್ಲೇಸುರರು ಗಟ್ಟಿ ಮನಸ್ಸಿನಿಂದ ಬರದ್ವಾನಕ್ಕೆ ಹೋಗುವ ನಿಶ್ಚಯ ಕೈಗೊಂಡರು. ಆದರೆ ಹಣವಿರಲಿಲ್ಲ. ಆದರೂ, ಪ್ರಗತಿಶೀಲನಾದವನನ್ನು ಯಾರು ತಡೆಯಲು ಸಾಧ್ಯ? ಆ ದಿನಗಳಲ್ಲಿ (ಮಾರ್ಕ್ಸ್‌ವಾದಿ ಸಂಘಟನೆಯಾದ) ಬೋಲ್‌ಶೇವಿಜಮ್‌ದ ಹೆಸರನ್ನು ಕೆಲವೇ ಜನರು ಕೇಳಿದ್ದರು. ಬಿಲ್ಲೇಸುರರಿಗಂತೂ ಇವತ್ತಿಗೂ ಅದು ತಿಳಿದಿಲ್ಲ, ಆದರೂ ಈ ವಿಚಾರ ತಾನೇ ತಾನಾಗಿ ಬಿಲ್ಲೇಸುರರ ತಲೆಗೆ ಹೊಳೆಯಿತು. ಅವರು ಅದೇ ಹರಿದ ಬಟ್ಟೆಯುಟ್ಟು ದರಿದ್ರ ಸ್ಥಿತಿಯಲ್ಲಿ ಕಾನ್‌ಪುರಕ್ಕೆ ಹೋದರು. ಟಿಕೆಟ್ ತೆಗೆಸದೆಯೇ ಕಲಕತ್ತೆಯ ಗಾಡಿಯಲ್ಲಿ ಕೂತರು. ಅಲಹಾಬಾದ್ ತಲುಪುತ್ತಿದ್ದಂತೆಯೇ ಟಿಕೆಟ್ ಚೆಕ್ಕರ್ ಬಂದು ಕಿವಿಹಿಡಿದು ಗಾಡಿಯಿಂದ ಕೆಳಗಿಳಿಸಿದ.

ಬಿಲ್ಲೇಸುರರು ಹಿಂದೂಸ್ಥಾನದ ನೀರು-ಗಾಳಿಗನುಗುಣವಾಗಿ ವಿನಯಪೂರ್ವಕವಾಗಿಯೆ ಕಾನೂನುಭಂಗ ಮಾಡುತ್ತಿದ್ದರು, ಏನೂ ಮಾತಾಡಲಿಲ್ಲ, ಸುಮ್ಮನೆ ಇಳಿದು ಹೋದರು; ಆದರೆ ತಮ್ಮ ಸಿದ್ಧಾಂತವನ್ನು ಬಿಡಲಿಲ್ಲ, ಪ್ಲ್ಯಾಟ್‌ಫಾರ್ಮಿನ ಮೇಲೆ ತಿರುಗಾಡುತ್ತ ಎಲ್ಲವನ್ನೂ ತಿಳಿದುಕೊಳ್ಳುತ್ತಲಿದ್ದರು. ಪೂರ್ವದ ಕಡೆ ಹೋಗುವ ಮತ್ತೊಂದು ಗಾಡಿ ಬಂದೊಡನೆ ಹತ್ತಿ ಕೂತರು. ಮೊಗಲಸರಾಯಿಯ ತನಕ ಹೋದ ನಂತರ ಮತ್ತೆ ಅವರನ್ನು ಕೆಳಗಿಳಿಸಲಾಯಿತು. ಆದರೆ ಎರಡು-ಮೂರು ದಿನಗಳಲ್ಲಿ, ಹತ್ತುತ್ತ-ಇಳಿಯುತ್ತ, ಬರದ್ವಾನ ತಲುಪಿದರು.

ಪಂಡಿತ್ ಸತ್ತೀದೀನ ಶುಕ್ಲರು ಬರದ್ವಾನಾದ ಮಹಾರಾಜರ ಸೇವೆಯಲ್ಲಿ ಜಮಾದಾರರಾಗಿದ್ದರು. ಬಂಗಾಳಿಗಳಿಗೆ 'ಸತ್ತೀದೀನ'ಶಬ್ದವನ್ನು ಉಚ್ಚರಿಸುವುದು ಜಡವೆನ್ನಿಸುತ್ತಿತ್ತು, ಅವರು 'ಸತ್ಯದೀನ'ಇಲ್ಲವೆ 'ಸತೀದೀನ'ಅನ್ನುತ್ತಿದ್ದರು, ಆದರೂ ಸತ್ತಿದೀನರ ಪ್ರಗತಿಗೆ ಏನೂ ಅಡೆತಡೆಯುಂಟಾಗಿರಲಿಲ್ಲ, ಅರ್ಥ ತಮ್ಮ ಅಪಾರ ಮೂರ್ಖತೆಯಿಂದಾಗಿ ಸತ್ತೀದೀನರು ಮಹಾರಾಜರ ಖಜಾಂಚಿಯಾದರು, ಇನ್ನರ್ಥ ಕಾರಣವೆಂದರೆ, ಕೀಲಿಕೈ ಸತ್ತೀದೀನರ ಬಳಿಯಿರುತ್ತಿತ್ತು, ಆದರೆ ಲೆಕ್ಕವನ್ನು ಇನ್ನೊಬ್ಬ ಬಾಬುಗಳು ಬರೆಯುತ್ತಿದ್ದರು. ತಾನು ತೀರ ಆಪ್ತನಾದ ಭರವಸೆಯ ಮನುಷ್ಯನಾದುದೇ ಇದಕ್ಕೆ ಕಾರಣವೆಂದು ಸತ್ತೀದೀನರು ತಿಳಿದಿದ್ದರು. ಈ ಸಮ್ಮಾನದ ಪ್ರಭಾವವು ಉಳಿದ ಹಿಂದೂಸ್ಥಾನಿಗಳ ಮೇಲೂ ಆಯಿತು. ಬಿಲ್ಲೇಸುರರು ಎಲ್ಲ ತಿಳಿದುಕೊಂಡೇ ಇವರಿಗೆ ಶರಣಾದರು. ಸತ್ತೀದೀನರು ಹೆಂಡತಿಯೊಂದಿಗರಾಗಿದ್ದರು. ಒಂದೆರಡು ಆಕಳುಗಳನ್ನು ಸಾಕಿಕೊಂಡಿದ್ದರು. ಹೆಂಡತಿ 'ಶಿಖರಿದಶನೆ' ಯಾಗಿದ್ದಳು. ಅಂದರೆ ಮುಂದಿನ ಎರಡು ಹಲ್ಲುಗಳು ಅವಶ್ಯಕತೆಗಿಂತ ಹೆಚ್ಚಾಗಿಯೆ ಮುಂದೆ ಬಂದಿದ್ದವು. ಎಷ್ಟೇ ಪ್ರಯತ್ನಿಸಿದರೂ ತುಟಿಗಳಿಂದ ಅವನ್ನು ಮುಚ್ಚಲಾಗುತ್ತಿರಲಿಲ್ಲ. ಪೈಕೂದ ಶುಕ್ಲ ವಂಶಸ್ಥರು. ವಾವೆಯಲ್ಲಿ ಬಿಲ್ಲೇಸುರರಿಗಿಂತ ಬಹಳ ದೊಡ್ಡವರು. ಇದರಿಂದಾಗಿ ಎಲ್ಲಾ ದೃಷ್ಟಿಯಿಂದ ಬಿಲ್ಲೇಸುರರಿಗೆ ಇದು ಸುರಕ್ಷಿತ ಸ್ಥಳ ಅನಿಸಿತು.

ಬಿಲ್ಲೇಸುರರು ಸತ್ತೀದೀನರಲ್ಲಿ ಇರತೊಡಗಿದರು. ಇಂತಹ ಪರಿಸ್ಥಿತಿಯಲ್ಲಿ ಓರ್ವ ಬಡವನ ಯೋಗ್ಯತೆಗೆ ಒಪ್ಪುವಂತೆ ಮೆತ್ತಗಿನ ಹೆಜ್ಜೆಗಳಿಡುತ್ತ, ಹೊಟ್ಟೆಯನ್ನು ಒಳಗೆಳೆದುಕೊಂಡು, ಬೆನ್ನು ಬಾಗಿಸಿಕೊಂಡು, ಕಣ್ಣು ಕೆಳಗೆ ಮಾಡಿಕೊಂಡು, ಬರುತ್ತ-ಹೋಗುತ್ತ ಇದ್ದರು. ಇಳಿಯೌವನದ ಕಾಲದಲ್ಲಿ ಸತ್ತೀದೀನರ ಹೆಂಡತಿಗೆ ಒಬ್ಬ ಸಹಾಯಕ ಸಿಕ್ಕಂತಾಯಿತು. ಎರಡು ಮೂರು ದಿನ ಊಟ ರುಚಿಸಲಿಲ್ಲ. ಒಂದು ದಿನ ಹೆಣ್ಣುಮಕ್ಕಳಿರುವ ಕೋಣೆಯ ಕಡೆ ಹೋದರು. ಆಕೆ ನಿರ್ಧಾರದ ದನಿಯಲ್ಲಿ ಹೇಳಿದಳು, "ಬಿಲ್ಲೇಸುರ, ನೀನು ಹೇಗೂ ಬಂದಿರುವಿ, ಈಗಂತೂ ಇಲ್ಲೇ ಇರುವಿ, ಈ ದನಕಾಯುವನನ್ನು ಯಾಕೆ ಬಿಡಿಸಿಬಿಡಬಾರದು? ಹರಾಮಿ, ದುಡ್ಡು ತಿನ್ನುತ್ತಾನೆ. ಕೆಲಸವಾದರೂ ಅಂಥದ್ದೇನಿದೆ? ಹುಲ್ಲು ಬೆಳೆದುಕೊಂಡೇ ಇದೆ, ಒಂದೆರಡು ಹೊರೆ ಕತ್ತರಿಸಿ ತಂದರಾಯಿತು; ಅದಿಲ್ಲದೆ ಹೋದರೆ ಇಲ್ಲೇ ನಿಚ್ಚಣಿಕೆ ಏರಿ ಮೇಲಿನ ಅಟ್ಟಕ್ಕೆ ಹೋದರಾಯಿತು, ಬತ್ತದ ಹುಲ್ಲಿನ ರಾಶಿ ಹಾಕಿದೆ, ದೊಡ್ಡದಾದ ಒಂದೆರಡು ಹೊರೆ ಕೊಯ್ದು ತಂದರಾಯಿತು; ಒಂದಿಷ್ಟು ಮುಸುರೆ ನೀರು

ಮಾಡಿ ಇಡಬೇಕು; ಬೇರೆ ಕಡೆಯ ಹಾಗೆ ಕೋಲು ಹಿಡಿದುಕೊಂಡು ದನಗಳ ಹಿಂದೆ ಓಡಾಡಬೇಕಿಲ್ಲ, ಉದ್ದುದ್ದ ಹಗ್ಗಗಳಿವೆ, ಮೂರು ಆಕಳುಗಳಿವೆ, ಬೇಕಾದಷ್ಟು ಹುಲ್ಲು ಬೆಳೆದುಕೊಂಡಿದೆ, ದನಗಳನ್ನು ಹೊಡಕೊಂಡು ಹೋಗಿ ಗೂಟ ಜಡಿದು ಕಟ್ಟಿದರಾಯಿತು, ಅವು ಮೇಯುತ್ತಾ ಇರುತ್ತವೆ; ಸಂಜೆಯ ಹೊತ್ತಿಗೆ ಬಾಬುಗಳ ಹಾಗೆ ತಿರುಗಾಡುತ್ತಾ ಹೋಗಿ ಅವುಗಳನ್ನು ಕರೆತಂದರಾಯಿತು, ಒಂದಿಷ್ಟು ಹಾಲು ಕರೆಯಬೇಕು; ರಾತ್ರಿ ಸೊಳ್ಳೆಗಳು ಬರುತ್ತವಲ್ಲ, ಒಂದಿಷ್ಟು ಲೋಬಾನದ ಹೊಗೆ ಹಾಕಬೇಕು; ಇದಿಷ್ಟು ಹೇಳಲಿಕ್ಕೇ ಹೊತ್ತಾಯಿತು'' (ಮಾಡಲಿಕ್ಕೆ ಇಷ್ಟು ಹೊತ್ತು ಬೇಕಾಗಲಾರದು). ಹಾಗೆಂದು ಸತ್ತೀದೀನರ ಹೆಂಡತಿ ಕಿವಿ ಹೊರಳಿಸಿ ಎರಡೂ ತುಟಿಗಳನ್ನು ಕೂಡಿಸುವ ಪ್ರಯತ್ನ ಮಾಡತೊಡಗಿದಳು.

ಬಿಲ್ಲೇಸುರರು ಜಾಗರೂಕರಾದರು. ದನಗಳನ್ನು ಮೇಯಿಸಲು ಸಮುದ್ರವನ್ನು ದಾಟಿ ಬರಲಿಲ್ಲ. ಈ ಕೆಲಸವನ್ನು ಊರಲ್ಲೂ ಮಾಡಬಹುದಿತ್ತು. ಆದರೆ ಇದು ಪರದೇಶ. ತನ್ನವರು ಯಾರೂ ಇಲ್ಲ. ಇನ್ನೊಬ್ಬರ ಸಹಾಯದಿಂದಲೇ ದಡ ಸೇರಬೇಕು. ಅಲ್ಲಿಯವರೆಗೆ ಮಾಡಿದರಾಯಿತು, ಅಂದುಕೊಂಡರು. ನೌಕರಿ ಸಿಗದಿದ್ದರೆ ನಂತರ ಮನೆಯ ಹಾದಿ ಹಿಡಿದರಾಯಿತು.

ಬಿಲ್ಲೇಸುರರು ಉತ್ತರಿಸಲು ತಡವಾಯಿತು. ಸತ್ತೀದೀನರ ಹೆಂಡತಿ ಮತ್ತೊಮ್ಮೆ ಕಿವಿ ಹೊರಳಿಸಿದಳು, ಆಗ ಬಿಲ್ಲೇಸುರರು ಹೇಳಿದರು, ''ಇದೇನು ಅಂಥ ದೊಡ್ಡ ಕೆಲಸ, ಕೆಲಸಕ್ಕಾಗಿಯೇ ಬಂದಿದ್ದೇನೆ, ಏಳು ನೂರು ಮೈಲುಗಳಾಚೆಯಿಂದ-ದೇಶವು ಏಳುನೂರು ಮೈಲುಗಳಷ್ಟಾದರೂ ವಿಶಾಲವಾಗಿದ್ದೀತಲ್ಲವೆ?''

ಬಿಲ್ಲೇಸುರರ ನಿರ್ಧಾರದ ಮಾತಿಗೆ ಆಕೆ ದೃಢವಾಗಿ ಹೇಳಿದಳು, ''ಇನ್ನೂ ಹೆಚ್ಚೇ ಇದ್ದಿತು'' ಕಾನ್‌ಪುರದಿಂದ ಬರದ್ವಾನದ ವರೆಗಿನ ದೂರ. ವಿಚಾರಿಸಿ ಅಂದಳು, ''ಜಮಾದಾರರು ಬಂದೊಡನೆ ಕೇಳುವೆ, ಅವರ ಪುಸ್ತಕದಲ್ಲಿ ಎಲ್ಲಾ ಬರೆದಿರುತ್ತದೆ''

ಬಿಲ್ಲೇಸುರರು ಮೌನವಾಗಿದ್ದರು. ಮನಸ್ಸಿನಲ್ಲಿ ಅದೃಷ್ಟವನ್ನು ಹಳಿಯುತ್ತಲಿದ್ದರು.

ಸಂಜೆ ಜಮಾದಾರರು ಬಂದರು. ಊಟ ತಯಾರಾಗಿತ್ತು. ಹೆಂಡತಿ ಅಂದಳು, ''ಜಮಾದಾರರೆ, ಬಿಲ್ಲೇಸುರರು ಅನ್ನುತ್ತಾರೆ, ತಮ್ಮ ದೇಶ ಇಲ್ಲಿಂದ ಏಳುನೂರು ಮೈಲು ದೂರವಿದೆ, ನಾನೆನ್ನುತ್ತೇನೆ, ಇನ್ನೂ ಹೆಚ್ಚೇ ಇದ್ದೀತು. ನಿಮ್ಮ ಪುಸ್ತಕದಲ್ಲಿ ಎಲ್ಲಾ ಬರೆದಿದೆಯಲ್ಲವೆ?''

ಸತ್ತೀದೀನರಿಗೆ ಒಂದು ಡೈರಿ ದೊರೆತಿತ್ತು. ಡೈರಿಯನ್ನು ಅದೇ ಬಾಬುವೇ ಬರೆಯುತ್ತಿದ್ದ. ಬರೆಯಬೇಕಾದ ವಿಷಯವಲ್ಲದೆ ಅದರಲ್ಲಿ ಮತ್ತೆ ಏನೇನು ಬರೆಯಲಾಗಿದೆಯೆಂಬುದನ್ನು ಸತ್ತೀದೀನರು ಆಗಾಗ ಓದಿಸಿ ಕೇಳಿ ತಿಳಿದುಕೊಳ್ಳುತ್ತಿದ್ದರು. ಸತ್ತೀದೀನರಿಗೆನಿಸಿತು, ಮಹಾರಾಜರು ಉಚ್ಚ ಪದವಿಯನ್ನಂತೂ ಕೊಟ್ಟಿದ್ದಾರೆ, ಜೊತೆಗೇ ಸಂಸಾರವನ್ನೂ ತಮ್ಮ ಮುಷ್ಟಿಯಲ್ಲಿ ಬೋರೆಹಣ್ಣಿನ ಹಾಗೆ ಕೊಟ್ಟುಬಿಟ್ಟಿದ್ದಾರೆ. ಅನೇಕ ಸಲ ಅವರು ಪುಸ್ತಕವನ್ನು ಮನೆಗೆ ತಂದಿದ್ದರು, ಮತ್ತು ಅಲ್ಲಿ ಏನೇನು ಕೇಳಿದ್ದರೋ ಎಷ್ಟೆಷ್ಟು ನೆನಪಿತ್ತೋ, ಬಾಯಿಂದ ಹೆಂಡತಿಗೆ ಹೇಳಿದ್ದರು.

ಬಲಗೈಯಿಂದ ಮೀಸೆಯನ್ನೆತ್ತಿಕೊಂಡು ಬಾಯಿಯೊಳಗಿನ ತುತ್ತನ್ನು ನುಂಗಿ

ಸತ್ತೀದೀನರೆಂದರು, "ಏಳು ನೂರು ಮೈಲಂತೂ ಅಲಹಾಬಾದದವರೆಗೇ ಆಗುತ್ತದೆ." ಅವರ ಹೆಂಡತಿ ಹೊಳೆಯುವ ಕಣ್ಣುಗಳಿಂದ ಬಿಲ್ಲೇಸುರರನ್ನು ನೋಡತೊಡಗಿದಳು. ಬಿಲ್ಲೇಸುರರು ಸೋಲೊಪ್ಪಿಕೊಂಡು ಅಂದರು, "ಪುಸ್ತಕದಲ್ಲಿ ಬರೆದಿದೆಯೆಂದ ಮೇಲೆ ಇದೇ ಸರಿಯಿರಬೇಕು."

ಗಂಡನು ಪ್ರಸನ್ನನಾಗಿದ್ದುದನ್ನು ಅರಿತು ಹೆಂಡತಿ ಅರ್ಜಿಯನ್ನು ಮಂಡಿಸಿದಳು, ದೊಡ್ಡ ಮನುಷ್ಯರ ವಿಷಯದಲ್ಲಿ ಮೊದಲಿಗೆ ಅವರ ಮನಸ್ಥಿತಿ ತಿಳಿದುಕೊಂಡು ನಂತರ ವಿಷಯವನ್ನು ಹೇಳುತ್ತಾರಲ್ಲ ಆ ತರಹ. ಬಿಲ್ಲೇಸುರರು ಸಂಕಷ್ಟಕ್ಕೆ ಸಿಲುಕಿದಂತೆ ದೈನ್ಯ ಭಾವದಿಂದ ನೋಡುತ್ತಲಿದ್ದರು. ಸತ್ತೀದೀನರು ಅದರಲ್ಲೊಂದು ಸುಧಾರಣೆಯ ಅಂಶವನ್ನು ಕಂಡುಹಿಡಿದು ಹೇಳಿದರು, "ಬಿಲ್ಲೇಸುರರು ನಮ್ಮವರೇ ಅನ್ನುವುದರಲ್ಲಿ ಸಂಶಯವಿಲ್ಲ, ಆದರೆ ಆ (ದನಕಾಯುವ) ಹುಡುಗನಿಗಿಂತ ಹೆಚ್ಚಿಗೆ ತಿನ್ನುತ್ತಾರೆ ಅನ್ನುವುದರಲ್ಲೂ ಸಂಶಯವಿಲ್ಲ. ನಾವು ಸಂಬಳ ಕೊಡುವುದಿಲ್ಲ. ಎರಡೂ ಹೊತ್ತು ಊಟ ಮಾಡಿಕೊಂಡಿರಲಿ. ಸಂಬಳದ ಬದಲು ನಾವು ಕಂದಾಯದ ಜಮಾದಾರನಿಗೆ ಹೇಳಿಡುತ್ತೇವೆ, ಅವರು ಇವರಿಗೆ ಗುಮಾಸ್ತರ ಹೆಸರಿನ ಕಂದಾಯ ವಸೂಲಿಯ ಕಾಗದಗಳನ್ನು ಕೊಡುತ್ತಲಿರಲಿ, ಇವರು ನಾಲ್ಕಾರು ತಾಸುಗಳಲ್ಲಿ ಹೋಗಿ ತಲುಪಿಸಿ ಬರುತ್ತಾರೆ. ಇವರಿಗೆ ತಿಂಗಳಲ್ಲಿ ನಾಲ್ಕೈದು ರೂಪಾಯಿಗಳು ಸಿಗುತ್ತವೆ, ಹಾಗೇ ನಮ್ಮ ಕೆಲಸವನ್ನೂ ಮಾಡುತ್ತಿರಲಿ."

ಸತ್ತೀದೀನರ ಹೆಂಡತಿ ಉಪಕಾರ ಮಾಡಿದ ಭಾವದಿಂದ ಬಿಲ್ಲೇಸುರರನ್ನು ನೋಡಿದಳು. ಬಿಲ್ಲೇಸುರರು ಕೂಳು ಮತ್ತು ತಿಂಗಳಿಗೆ ನಾಲ್ಕೈದು ರೂಪಾಯಿಯ ಸಂಪಾದನೆ ಬಗ್ಗೆ ಯೋಚಿಸುತ್ತ ತಮ್ಮ ಧನ್ಯತಾಭಾವವನ್ನು ಹತ್ತಿಕ್ಕಿಕೊಳ್ಳ ತೊಡಗಿದ್ದರು. ಇಷ್ಟಾದರೆ ಮುಂದೆ ಬಹಳಷ್ಟನ್ನು ಮಾಡಬಹುದು. ಎಂದುಕೊಂಡು ಅವರು ಒಪ್ಪಿಗೆಯ ದೃಷ್ಟಿಯಿಂದ ಸತ್ತೀದೀನರ ಹೆಂಡತಿಯನ್ನು ನೋಡಿದರು.

ಜಮಾದಾರರು ಗಂಭೀರವಾಗಿ ಎದ್ದು ಕೈ-ಬಾಯಿ ತೊಳೆದುಕೊಳ್ಳತೊಡಗಿದರು.

## ಮೂರು

ಬಿಲ್ಲೇಸುರರು ಬಾಳಿನ ಹೋರಾಟದ ಕಣಕ್ಕೆ ಇಳಿದರು. ಮೊದಲಿನಲ್ಲಿ ದನಗಳ ಕೆಲಸದ ಬಗ್ಗೆ ಹೇಳದೇ ಇದ್ದ ಅನೇಕ ವಿಷಯಗಳು ಎದುರಿಗೆ ಬಂದವು. ಸೆಗಣಿ ಬಾಚುವುದು, ಕೊಟ್ಟಿಗೆಯನ್ನು ಶುಚಿಗೊಳಿಸುವುದು, ಗಂಜಳ ಹಾಕಿದಲ್ಲಿ ಬೂದಿ ಸುರಿಯುವುದು, ಕುಳ್ಳು ತಟ್ಟುವುದು, ಆಗಾಗ ದನಗಳನ್ನು ಮೇಯಿಸುವುದು ಹೀಗೆ ಒಳಗಿನ ಕೆಲಸಗಳೆಷ್ಟೋ ಇದ್ದವು. ಬಿಡುವೇ ಸಿಗುತ್ತಿರಲಿಲ್ಲ. ಆದರೆ ಕಾಗದಗಳನ್ನು ತಲುಪಿಸಿ ಬರುವುದಂತೂ ಅನಿವಾರ್ಯವಾಗಿತ್ತು. ಒಂದು ಕಾಗದಕ್ಕೆ ಮೂರಾಣೆ ಸಿಗುತ್ತಿತ್ತು, ದೂರದ ಕಾಗದಗಳನ್ನು ತಲುಪಿಸುವಾಗ ಎರಡರಷ್ಟು ಸಿಗುತ್ತದೆಂದು ಕೆಲ ದಿನಗಳಲ್ಲೇ ಬಿಲ್ಲೇಸುರರಿಗೆ ಗೊತ್ತಾಯಿತು. ಅವರು ಅದಕ್ಕಾಗಿ ಮುಂದೆ ಬಂದರು. ಕಂದಾಯದ ಜಮಾದಾರನೆಂದ, "ನೀನಂತೂ ಇಲ್ಲಿಯ ನೌಕರನಲ್ಲ, ಯಾರದೇ ಶಿಫಾರಸ್ಸಿನ ಮೇಲೂ ಇಲ್ಲ. ಅದರ ಮೇಲೆ ಸತ್ತೀದೀನರು ಬೇಡವೆಂದಿದ್ದಾರೆ, ದೂರದೂರಿನ ಕಾಗದಗಳನ್ನು ನಾವು ಕೊಡುವಂತಿಲ್ಲ." ಬಿಲ್ಲೇಸುರರು

ಅವನ ಕಾಲಿಗೆ ಬಿದ್ದು ಬೇಡಿದರು, "ನೀವೇ ನನ್ನನ್ನು ಒಂದಿಲ್ಲೊಂದು ದಿನ ನೌಕರಿಗೆ ಹಚ್ಚಿಕೊಳ್ಳಬೇಕು; ಅಲ್ಲಿಯವರೆಗೆ ದೂರದ ಊರುಗಳ ಕಾಗದಗಳನ್ನೂ ಕೊಡಿ, ನಾನು ಹನ್ನೆರಡು ಹರದಾರಿ ದೂರವನ್ನು ಆರೇ ಗಂಟೆಗಳಲ್ಲಿ ತಲುಪಿ ಬರಬಲ್ಲೆ." ಆಗ ಜಮಾದಾರರು ಕಾಗದಗಳನ್ನು ಕೊಡತೊಡಗಿದರು.

ಕಾಗದಗಳನ್ನು ತಲುಪಿಸಿ ಬರುವ ಈ ಕೆಲಸದ ಬಗ್ಗೆ ಸತ್ತೀದೀನರ ಹೆಂಡತಿಗೆ ಬಹಳ ಅಸಮಾಧಾನವಿತ್ತು. ಅಲ್ಲಿಂದ ತಿರುಗಿ ಬಂದ ಬಿಲ್ಲೇಸುರರು ಸದಾ ಆಕೆ ಹುಬ್ಬುಗಂಟಿಕ್ಕಿದ್ದನ್ನು ನೋಡುತ್ತಿದ್ದರು. ದನಗಳ ಕೆಲಸದಲ್ಲಿ ಒಂದಿಷ್ಟೂ ಐಬು ಇರುತ್ತಿರಲಿಲ್ಲ. ಹತ್ತುಗಂಟೆಯ ಹೊತ್ತಿಗೆ ಎಲ್ಲಾ ಕೆಲಸ ಮುಗಿಸಿಬಿಡುತ್ತಿದ್ದರು. ತಿರುಗಿ ಬಂದು ದನಗಳನ್ನು ಬಿಚ್ಚಿ ರಾತ್ರಿ ಒಂಬತ್ತರವರೆಗೂ ಅವುಗಳ ಹಿಂದೇ ಇರುತ್ತಿದ್ದರು. ಆದರೂ ಸತೀದೀನರ ಹೆಂಡತಿಯ ಕಿರಿಕಿರಿ ತಪ್ಪುತ್ತಿರಲಿಲ್ಲ. ಬೇರೆ ಆಳನ್ನೂ ಅವರು ಹಚ್ಚಿಕೊಳ್ಳಲಿಲ್ಲ, ಯಾಕೆಂದರೆ ಬಿಲ್ಲೇಸುರರು ಕಡಿಮೆ ಬೆಲೆಯಲ್ಲಿ ಸಿಕ್ಕಿದ್ದರು. ಅನೇಕ ಸಲ ಕಿವಿಗಳಿಗೆ ಅಪ್ರಿಯವಾದ ಮಾತುಗಳನ್ನು ಆಕೆ ಆಡುತ್ತಿದ್ದಳು, ಅದರಿಂದ ಹೊಟ್ಟೆಯೊಳಗಿನ ಕರುಳುಗಳೇ ಹೊರಬರುವಂತಾಗುತ್ತಿತ್ತು. ಬಿಲ್ಲೇಸುರರು ಎಲ್ಲ ಸಹಿಸಿಕೊಳ್ಳುತ್ತಿದ್ದರು. ಬೇಸಿಗೆಯ ದಿನಗಳಲ್ಲಿ ಹತ್ತು ಹನ್ನೆರಡು ಗಂಟೆಯವರೆಗೂ ಮನೆಯ ಆ-ಈ ಕೆಲಸಗಳನ್ನು ಮಾಡುತ್ತಿದ್ದರು, ನಂತರ ತಡವಾಯಿತಲ್ಲ ಅಂದುಕೊಳ್ಳುತ್ತ ಕಾಗದಗಳನ್ನು ಅಲ್ಲಲ್ಲಿ ತಲುಪಿಸುತ್ತ ಬಿಸಿಲಲ್ಲಿ, ಬರಿನೆತ್ತಿಯಲ್ಲಿ, ಒಂದು ಕೊಡೆಯೂ ಇಲ್ಲದೆ, ಓಡುತ್ತೋಡುತ್ತಲೇ ದಾರಿಯನ್ನು ಕ್ರಮಿಸುತ್ತಿದ್ದರು. ತಿರುಗಿ ಬಂದಾಗ ಬಾಯಿ ಒಣಗಿ, ತುಟಿಗಳು ಮುದುಡಿ, ಬೆವರೋ ಬೆವರಾಗಿರುತ್ತಿದ್ದರು. ಇನ್ನು ಇಲ್ಲಿ ಉಳಿದ ಕೆಲಸ ಮಾಡಲು ಎದೆ ಬಡಿದುಕೊಳ್ಳುತ್ತಿತ್ತು. ಮನೆ ತಲುಪಿ ಒಂದರೆಕ್ಷಣ ಕೂತುಕೊಳ್ಳಲಿಕ್ಕಿಲ್ಲ, ಸತ್ತೀದೀನರ ಹೆಂಡತಿ ಕೇಳುತ್ತಿದ್ದಳು, "ಇವತ್ತೆಷ್ಟು ಸಂಪಾದಿಸಿ ತಂದಿರಿ ಬಿಲ್ಲೇಸುರ?" ಚೂರಿಯಂತೆ ಹರಿತವಾದ ನಾಲಿಗೆ, ಭೇದಿಸುವಂತಹ ಉದ್ದೇಶ. ಅಂಥ ಶೆಕೆಯಲ್ಲೂ ಕೃತ್ರಿಮವಾಗಿ ಹಲ್ಲು ಕಿರಿಯುತ್ತಾ ಉತ್ತರಿಸುತ್ತಿದ್ದ ಬಿಲ್ಲೇಸುರರು ದಣಿದು ಹೋಗಿದ್ದರೂ ದನಗಳ ಹಿಂದೆ ಸುತ್ತುತ್ತ ಕಾರ್ಯಮಗ್ನರಾಗುತ್ತಿದ್ದರು.

ಆ ದಿನಗಳಲ್ಲಿ ಅನೇಕರಿಗೆ ಬಿಲ್ಲೇಸುರರು ಗಂಡಸಾಗುವುದಕ್ಕಿಂತ ಹೆಂಗಸಾಗಿರುವುದೇ ಲೇಸು ಎಂದು ಹೇಳುತ್ತಿದ್ದರು. ಯಾರಿಗೂ ಅದರರ್ಥ ತಿಳಿಯುತ್ತಿರಲಿಲ್ಲ.

ಊರಲ್ಲಿಯೂ ಬಿಲ್ಲೇಸುರರಿಗೆ ಸಹಿಸಿಕೊಳ್ಳುವುದು ರೂಢಿಯಾಗಿತ್ತು. ಅವರೆಂದೂ ಏನೂ ಅನ್ನಲಿಲ್ಲ. ತಮ್ಮ ಬಾಳಿನ ಪುಟಗಳನ್ನು ತೆರೆಯುತ್ತಲೇ ಹೋದರು. ಯಾವುದೇ ವಿಜ್ಞಾನಿಗಿಂತ ಹೆಚ್ಚಿನ ನಾಸ್ತಿಕತೆಯಿಂದ.

ಬೇರೆಯವರನ್ನು ಸಂದೇಹಿಸುತ್ತ ಹೊರಟ ಬಿಲ್ಲೇಸುರರು ಒಂದು ವಿಶಿಷ್ಟ ರೀತಿಯ ವ್ಯಕ್ತಿಯಾದರು. ಆದರೆ ಅವರು ಧೈರ್ಯಗುಂದಲಿಲ್ಲ, ಏಕಾಕಿ ಈಜುಗಾರನ ಹಾಗೆ ಮುನ್ನಡೆದರು. ದೂರದ ಊರುಗಳಿಗೆ ಹೋಗಿ ದುಡ್ಡುಗಳಿಸುವ ವಿಷಯವನ್ನು ಸತ್ತೀದೀನರ ಹೆಂಡತಿಗೆ ಎಂದೂ ಗೊತ್ತಾಗಗೊಡಲಿಲ್ಲ. ಹನ್ನೆರಡು ಹರದಾರಿ ಹೋದರೆ ಆರೇ ಹರದಾರಿ ಅಂದರು. ಜಗತ್ತನ್ನು ಖುಶಿಗೊಳಿಸುವ ರೀತಿಯನ್ನು ಅರಿತುಕೊಂಡುಬಿಟ್ಟಿದ್ದರು; ಉಸಿರು ಬಿಗಿಹಿಡಿದು ಹೀಗೆ ಕೆಲಸ ಮಾಡುತ್ತ ಅನೇಕ ತಿಂಗಳುಗಳು ಕಳೆದವು. ಒಂದು ದಿನ ಜಮಾದಾರ

ಖುಶಿಯಾಗಿದ್ದುದನ್ನು ಕಂಡು ಅಂದರು, "ಬಾಬಾ, ಇನ್ನು ನೌಕರಿಗೆ ಹಚ್ಚಿಕೊಳ್ಳಿರಲ್ಲ."

ಅವರೆಂದರು, "ಸರಿ, ನಾಳೆ ಅರ್ಜಿ ಕೊಡು."

ಬಿಲ್ಲೇಸುರರು ಮನ್ನಿಯ ತಮ್ಮನಲ್ಲವೆ, ಐದಡಿಗಿಂತ ತುಸು ಎತ್ತರವಿದ್ದರು. ಎತ್ತರದ ಪ್ರಶ್ನೆ ಅಡ್ಡಬರುವುದೆಂದು ಅವರಿಗೆ ಗೊತ್ತಿತ್ತು. ಉಪಾಯ ಕಂಡುಹಿಡಿದರು. ಒಂದೂವರೆ ಇಂಚಿಗಿಂತ ಹೆಚ್ಚು ಎತ್ತರದ ಹಿಮ್ಮಡಿಯ ಚರ್ಮದ ಚಪ್ಪಲಿಗಳಿದ್ದವು. ಅವುಗಳಲ್ಲಿ ಹತ್ತಿಯ ಪಟ್ಟಿ ಮಾಡಿ ತುರುಕಿದರು. ಮೆಟ್ಟಿ ನಿಂತಾಗ ಇಟ್ಟಿಗೆಯ ಮೇಲೇರಿ ನಿಂತ ಹಾಗಾಯಿತು. ಆದರೆ ಸಂಕೋಚಪಡಲಿಲ್ಲ, ಅಂಜಲೂ ಇಲ್ಲ, ಕರ್ತವ್ಯ ನಿರ್ವಹಿಸುತ್ತಿರುವ ಗತ್ತಿನಲ್ಲಿ ಹೋದರು. ಕಛೇರಿಯಲ್ಲಿ ಅಳತೆಪಟ್ಟಿ ತಂದು ಹಚ್ಚಿದರು. ಬಿಲ್ಲೇಸುರರು ಕಣ್ಣೆಸಿದು ನೋಡಿದರು, ಎತ್ತರ ಸರಿಹೋಯಿತು. ಅಳತೆ ಮಾಡುವಾತ ಹೇಳಿದ-ಒಂದೂವರೆ ಇಂಚು ಕಡಿಮೆಯಾಗುತ್ತದೆ.

ಬಿಲ್ಲೇಸುರರು ಜಮಾದಾರನೆಡೆ ಬಿಡುಗಣ್ಣಿನಿಂದ ನೋಡಿದರು. ಜೊತೆಗೇ ವಿನಂತಿಯ ಭಾವ, ಜಮಾದಾರರು ಮುಗುಳ್ನಕ್ಕರು. "ಬಿಲ್ಲೇಸುರ, ನೀನು ಸರಕಾರಿ ನೌಕರನಾಗಲಾರೆ, ಆದರೆ ಯಾರಾದರೊಬ್ಬ ಸಿಪಾಯಿ ರಜೆಯ ಮೇಲೆ ಹೋದಾಗ, ಆಗೆಲ್ಲ ಆ ಕೆಲಸ ನಿನಗೆ ಸಿಗುವುದು, ಸಂಬಳವಿಲ್ಲದೆ ರಜೆಯ ಮೇಲೆ ಹೋದವರ ಸಂಬಳವೂ ಸಿಗುವುದು" ಎಂದರು.

ತಮ್ಮ ಪ್ರಗತಿಯ ಬಗ್ಗೆ ಯೋಚಿಸಿ ಬಿಲ್ಲೇಸುರರು ಮುಗುಳ್ನಕ್ಕರು. ಹೀಗೆ ಒಂದು ವರ್ಷ ಕಳೆಯಿತು.

## ನಾಲ್ಕು

ಸತ್ತೀದೀನರಿಗೆ ಹೆಂಡತಿ ಬಂದು ಅನೇಕ ವರ್ಷಗಳಾಗಿದ್ದವು, ಆದರೆ ಅವರು ಜಗನ್ನಾಥ ದೇವರ ದರ್ಶನ ಪಡೆದಿರಲಿಲ್ಲ. ಅವರ ಹತ್ತಿರ ಸಾಕಷ್ಟು ಹಣವಿತ್ತು. ಒಂದು ದಿನ ಜಮಾದಾರರಿಗೆ ಹೆಂಡತಿ ಹೇಳಿದಳು, "ಜಮಾದಾರರೇ, ಹಣವೇನೋ ಸಾಕಷ್ಟಿದೆ ಆದರೆ ಮಕ್ಕಳೇ ಆಗಲಿಲ್ಲ, ನಮ್ಮ-ನಿಮ್ಮ ತರುವಾಯ ಹಣ ಅನ್ಯರ ಪಾಲಾಗುವುದು. ನಾನು ಬಂದು ಇಷ್ಟು ಕಾಲವಾಯಿತು ಜಗನ್ನಾಥದೇವರ ದರ್ಶನವಾಗಲಿಲ್ಲ. ಈ ಸಲ ಅವನ ದರ್ಶನ ಪಡೆಯಬೇಕು. ತಂದೆ, ನನ್ನ ಮಡಿಲು ತುಂಬಿಸು, ನಿನ್ನ ಪಾದಕ್ಕೆ ಉರುಳು ಸೇವೆ ಮಾಡಿ ನೂರಾಒಂದು ರೂಪಾಯಿ ಮುಡಿಪು ಸಲ್ಲಿಸುವೆ ಎಂದು ಬೇಡಿಕೊಳ್ಳಬೇಕು. ಅವನು ಖಂಡಿತ ನನ್ನ ಮನೋಕಾಮನೆಯನ್ನು ಪೂರೈಸುತ್ತಾನೆ. ದೇಶ ವಿದೇಶಗಳಿಂದ ಜನ ಬರುತ್ತಾರೆ, ಕೇಳಿದ ವರದಾನ ಅವರಿಗೆ ಸಿಗುತ್ತದೆ, ನನಗೆ ಎಲ್ಲಾ ಸುಖವೂ ಇದೆ. ಒಳ್ಳೆಯ ಗಂಡ ಸಿಕ್ಕ ಹಾಗೆ ಒಳ್ಳೆಯ ಮನೆಯೂ ಸಿಕ್ಕಿದೆ; ಹಣವಿದೆ, ಮಾನಮರ್ಯಾದೆಯಿದೆ, ಒಡವೆಗಳಿವೆ, ಬಟ್ಟೆಗಳಿವೆ, ಹಾಲು ತುಪ್ಪ-ದಂಡಿಯಾಗಿದೆ, ಆದರೆ ಊಹ್ಞೂ ಹ್ಞೂ-" ಮತ್ತೆ ಅಳು, ಅಂದರೆ ಮಕ್ಕಳಿಲ್ಲವಲ್ಲ ಅಂತ.

ಸತ್ತೀದೀನರು ಆಕೆಯನ್ನು ಎದೆಗೊರಗಿಸಿಕೊಂಡು ಹೇಳಿದರು, "ನಿನಗೇನು ಅಂಥ ವಯಸ್ಸಾಗಿದೆಯೇ ಈಗ? ಮೊದಲನೆಯಾಕೆ ಇದ್ದಿದ್ದರೆ ಅದು ಬೇರೆಯಿತ್ತು. ಆಕೆ ಪಾಪ

ಹಿಟ್ಟು ಬೀಸುತ್ತಲೇ ಸತ್ತುಹೋದಳು. ಐದು ವರ್ಷಗಳಾದವು, ನಿನ್ನನ್ನು ಲಗ್ನವಾಗಿ ಕರೆತಂದೆ. ಈಗ ನಿನಗೆ ಇಪ್ಪತ್ತು ವರ್ಷ ಇದ್ದೀತಷ್ಟೇ?"

ಬಿಕ್ಕುತ್ತಲೇ ಹೆಂಡತಿ ಹೇಳಿದಳು, "ಹತ್ತೊಂಬತ್ತು ನಡೆಯುತ್ತಿದೆ?" ವಾಸ್ತವವಾಗಿ ಆಕೆಗೆ ಇಪ್ಪತ್ತೈದು ವರ್ಷಕ್ಕಿಂತ ಹೆಚ್ಚು ವಯಸ್ಸಾಗಿತ್ತು.

"ಹಾಗನ್ನದಿರಿ," ಹೆಂಡತಿ ಅಂದಳು, "ಜಗನ್ನಾಥ ದೇವರ ಕೃಪೆಯಿಂದ ಆಗುತ್ತವೆ ಅನ್ನಿರಿ."

ಸತ್ತೀದೀನರು ಗಂಭೀರವಾದರು. "ಜಗನ್ನಾಥ ದೇವರ ಕೃಪೆ ಎಲ್ಲಾ ಥರ ಇದೆ. ದೊಡ್ಡ ಹುದ್ದೆ ಸಿಕ್ಕಿದೆ, ಇದೂ ಅವನದೇ ಕೃಪೆ, ಹಾಗೆ ಮನಸ್ಸಿನಲ್ಲಿ ನಾವು ದಿನಾ ಆತನ ದರ್ಶನ ಪಡೆಯುತ್ತೇವೆ, ಇನ್ನು ಆತನಿರುವ ಊರಿಗೆ ಹೋಗುವ ಮಾತು ಹೌದಲ್ಲವೇ, ಆಗಲಿ, ಹೋಗೋಣ, ಹತ್ತು ದಿನ ರಜೆ ಪಡೆಯುವೆ. ಅದೇನಂಥ ದೊಡ್ಡ ವಿಷಯ?"

ಹೆಂಡತಿಗೆ ಧೈರ್ಯ ತುಂಬಿದರು. ಅದೇ ಹೊತ್ತಿಗೆ ಬಿಲ್ಲೇಸುರರು ಬಂದರು. ಜಮಾದಾರರು ಕೇಳಿದರು, "ಬಿಲ್ಲೇಸುರ, ಜಗನ್ನಾಥ ದೇವರಿಗೆ ಹೋಗೋಣ ಬರುವಿಯಾ?"

ಬಿಲ್ಲೇಸುರರಿಗೆ ಹಣ ಖರ್ಚುಮಾಡುವ ಮನಸ್ಸಿರಲಿಲ್ಲ. ಸತ್ತೀದೀನರಿಗೆ ಅರ್ಥವಾಯಿತು. ಆದರೆ ಬಿಲ್ಲೇಸುರರ ಹತ್ತಿರ ಹಣವಾದರೂ ಎಷ್ಟಿದ್ದೀತು, ಯೋಚಿಸಿ ಹೇಳಿದರು, "ಸರಿ, ಹತ್ತು ದಿನಗಳ ರಜೆ ಪಡೆದುಕೊ, ಬರುವ ರವಿವಾರ ಹೊರಡೋಣ", ಸತ್ತೀದೀನರಿಗೆ ಜೊತೆಗೊಂದು ಆಳು ಬೇಕಾಗಿತ್ತು.

ಬಿಲ್ಲೇಸುರರು ಬೇರೆಯವರ ಗೈರುಹಾಜರಿಯಲ್ಲಿ ಕೆಲಸ ಮಾಡತೊಡಗಿದಾಗ ಕಛೇರಿಗೆ ದಿನಾ ಹೋಗುವುದು ಅನಿವಾರ್ಯವಾಯಿತು. ಸತ್ತೀದೀನರು ದನಗಳ ಕೆಲಸಕ್ಕಾಗಿ ಬೇರೊಬ್ಬ ಆಳನ್ನು ಇಟ್ಟುಕೊಳ್ಳಬೇಕಾಯಿತು. ಹೊರಗಿನ ಹೆಚ್ಚು ಪಾಲು ಕೆಲಸವನ್ನು ಬಿಲ್ಲೇಸುರರು ಮಾಡಿಕೊಡುತ್ತಿದ್ದರು. ಹಾಗೆ ಅವರು ಈಗ ಬೇರೆ ಇರತೊಡಗಿದ್ದರು, ತಾವೇ ಅಡಿಗೆ ಮಾಡಿಕೊಳ್ಳುತ್ತಿದ್ದರು.

ಪುಕ್ಕಟೆಯಾಗಿ ಜಗನ್ನಾಥ ದೇವರ ದರ್ಶನವಾಗುವುದು ಎಂದಾಗ ಬಿಲ್ಲೇಸುರರ ಸಂತೋಷಕ್ಕೆ ಕೊನೆ ಮೊದಲಿಲ್ಲದಂತಾಯಿತು. ಅವರು ರಜೆ ಮಂಜೂರು ಮಾಡಿಸಿಕೊಂಡರು. ಮುಂದಿನ ರವಿವಾರ ಸತ್ತೀದೀನರ ಸಾಮಾನುಗಳನ್ನು ಸಂಭಾಳಿಸುವ ಕೆಲಸ ವಹಿಸಿಕೊಂಡು ಸತ್ತೀದೀನ ಹಾಗೂ ಅವರ ಹೆಂಡತಿಯ ಜೊತೆ ಊರಿಗೆ ಹೊರಟರು.

ಜಗನ್ನಾಥದೇವರ ಕೃಪಾದೃಷ್ಟಿ ತನ್ನ ಮೇಲೆ ಬೀಳುತ್ತಲೇ ತಾನು ಗರ್ಭಿಣಿಯಾಗುವೆನೆಂದು ಸತ್ತೀದೀನರ ಹೆಂಡತಿಗೆ ಭರವಸೆಯಿತ್ತು. ಅದೇ ರೀತಿ ಸತ್ತೀದೀನರು ಬಯಸಿದೊಡನೆ ತಮ್ಮ ಕೆಲಸ ಕಾಯಂ ಆಗುವುದೆಂದು ಬಿಲ್ಲೇಸುರರಿಗೆ ಭರವಸೆಯಿತ್ತು.

ಈ ಭರವಸೆಯನ್ನು ಫಲಪ್ರದಗೊಳಿಸುವ ಉಪಾಯದ ಬಗ್ಗೆ ಬಿಲ್ಲೇಸುರರು ದಾರಿಯಿಡೀ ಯೋಚಿಸುತ್ತ ಸಾಗಿದರು.

ಪುರಿ ತಲುಪಿದಾಗ ಅವರಿಗೆ ಬಹಳ ಖುಶಿಯಾಯಿತು. ಕಾನ್‌ಪುರದಿಂದ ಬರದ್ವಾನದ ವರೆಗೆ ಇಂತಹ ದೃಶ್ಯ ಎಲ್ಲೂ ಕಂಡಿರಲಿಲ್ಲ. ಸಮುದ್ರ ತೀರ-ಮಳಲರಾಶಿ-ನೋಡಿ ಬಹಳ ಖುಶಿಯಾಯಿತು. ಸಮುದ್ರ ನೋಡಿ ಮೈಮರೆತುಬಿಟ್ಟರು. ಜಗನ್ನಾಥದೇವರ ನೆನಪಿಗೆಂದು

ಬಹಳಷ್ಟು ಶಂಖುಗಳನ್ನು ಸಮುದ್ರತೀರದಿಂದ ಆಯ್ದು ತೆಗೆದಿರಿಸಿಕೊಂಡರು, ಕೆಲವು ಚಿಕ್ಕ ಚಿಕ್ಕ ಶಂಖುಗಳನ್ನು ಸಹ.

ಮಾರ್ಕಂಡೇಯ, ವಟಕೃಷ್ಣ, ಚಂದನತಾಲಾಬ ಇತ್ಯಾದಿ ಪ್ರಸಿದ್ಧ ಸ್ಥಳಗಳನ್ನು ಸಂದರ್ಶಿಸುತ್ತ ಸುತ್ತಾಡಿದರು. ದೇವಾಲಯದ ಪ್ರಾಕಾರದಲ್ಲಿ ಅನೇಕ ಚಿಕ್ಕ ಚಿಕ್ಕ ದೇವಾಲಯಗಳಿವೆ. ಒಂದೊಂದನ್ನೇ ನೋಡುತ್ತಾ ತಿರುಗಾಡಿದರು. ಏಕಾದಶಿಯ ದಿನ ಒಂದೆಡೆ ತಲೆಕೆಳಗೆ ಮಾಡಿ ನೇತು ಬಿದ್ದವರನ್ನು ನೋಡಿದರು. ಸತ್ತೀದೀನರೆಂದರು, "ದೇವರ ಮಹಿಮೆಯಿಂದ ಇಲ್ಲಿ ಏಕಾದಶಿಯೇ ತಲೆ ಕೆಳಗಾಗಿದೆ, ಇಲ್ಲಿ ಯಾರೂ ಏಕಾದಶೀವ್ರತ ಮಾಡುತ್ತಿರಲಾರರು." ಬಿಲ್ಲೇಸುರರು ಅವುಗಳಿಗೂ ಕೈಜೋಡಿಸಿ ನಮಸ್ಕರಿಸಿದರು. ನಂತರ ಎಲ್ಲರೂ ಕಲಿಯುಗದ ಮೂರ್ತಿ ನೋಡಲು ಹೋದರು. ಕಲಿಯುಗಪುರುಷ ತನ್ನ ಹೆಂಡತಿಯನ್ನು ಹೆಗಲ ಮೇಲೆ ಹೊತ್ತುಕೊಂಡು ತಂದೆಯನ್ನು ಕಾಲ್ನಡಿಗೆಯಿಂದ ಕರೆದೊಯ್ಯುತ್ತಿದ್ದಾನೆ. ಸತ್ತೀದೀನರ ಹೆಂಡತಿ ಗಮನವಿಟ್ಟು ನೋಡುತ್ತಿದ್ದಳು. ಅನೇಕ ದಿನಗಳನ್ನು ಆನಂದದಿಂದ ಕಳೆದರು. ಭುವನೇಶ್ವರಕ್ಕೆ ಹೋಗಲು ಸಿದ್ಧತೆ ಮಾಡಿದರು.

ಜಗನ್ನಾಥದೇವರಲ್ಲಿ ಎಂಜಲು ಎಂಬುದಿಲ್ಲ, ಅಂದರೆ ಬೇರೆಯವರ ಎಂಜಲು ತಿನ್ನುವುದು ಅಲ್ಲಿ ರೂಢಿ. ಇಲ್ಲಿಯ ಜನ, ಯಾವಾಗಲೂ ಮಡಿಯ ನಿಯಮವನ್ನು ಪಾಲಿಸುವವರು, ಅಲ್ಲಿ ಹೋದಾಗ ಮುಕ್ತವಾಗಿ ಒಬ್ಬರೊಬ್ಬರ ಎಂಜಲು ತಿನ್ನುತ್ತಾರೆ. ಯಾರೂ ತಪ್ಪು ತಿಳಿಯುವುದಿಲ್ಲ. ಬಿಲ್ಲೇಸುರರು ಜಮಾದಾರ ಹಾಗೂ ಜಮಾದಾರಿಣಿಯ ಎಲೆಗಳಲ್ಲಿ ತಮ್ಮ ಎಂಜಲು ಕೈಯಿಂದ ಅನ್ನ ಹಾಕಿದರು. ಅವರು ಏನೂ ಅನ್ನಲಿಲ್ಲ, ಅದನ್ನು ತಿನ್ನುತ್ತಾ ನಗುತ್ತಾ ಇದ್ದರು.

ಎರಡು ದಿನ ಕಳೆದ ನಂತರದ ಮಾತು. ಜಮಾದಾರರ ಸ್ನಾನವಾಗಿತ್ತು, ಬಿಲ್ಲೇಸುರರೂ ಸ್ನಾನ ಮುಗಿಸಿ ಬಂದರು. ಬಂದು ಸೀದಾ ಜಮಾದಾರರ ಬಳಿ ಹೋದರು, ಅವರ ಕಾಲುಗಳನ್ನು ಹಿಡಿದು ಸಾಷ್ಟಾಂಗವೆರಗಿದರು.

"ಇದೇನು ಬಿಲ್ಲೇಸುರ?–ಇದೇನು?" ಜಮಾದಾರರು ಸಂಶಯ ದೃಷ್ಟಿಯಿಂದ ನೋಡುತ್ತಾ ಕೇಳಿದರು. ಬಿಲ್ಲೇಸುರರು ಕರುಣಾಪೂರಿತ ಧ್ವನಿಯಿಂದ ಹೇಳಿದರು. "ಏನೂ ಇಲ್ಲ, ತಂದೆ, ಭವಸಾಗರದಿಂದ ನನ್ನನ್ನು ಉದ್ಧರಿಸಿರಿ."

"ಭವಸಾಗರದಿಂದೆತ್ತಿ ಉದ್ಧರಿಸುವುದು ನನ್ನಿಂದ ಹೇಗೆ ಸಾಧ್ಯ ಬಿಲ್ಲೇಸುರ? ಏನಾಗಿದೆ ನಿನಗೆ?" ಸತ್ತೀದೀನರು ವಿಚಲಿತರಾದರು.

ಕಾಲು ಹಿಡಿದಿದ್ದಂತೆಯೇ ಬಿಲ್ಲೇಸುರರೆಂದರು, "ತಂದೆ, ನನಗೆ ಗುರುಮಂತ್ರ ಬೋಧಿಸಿರಿ!"

"ಅರೆ, ಇಲ್ಲಿ ಒಬ್ಬರಿಗಿಂತ ಒಬ್ಬ ಶ್ರೇಷ್ಠ ಗುರುಗಳಿದ್ದಾರೆ. ನನ್ನ ಕಾಲು ಬಿಡು, ಅವರಲ್ಲಿ ಯಾರಿಂದ ಬೇಕಾದರೂ ಮಂತ್ರ ಪಡೆದುಕೊ." ಸತ್ತೀದೀನರು ಕಾಲು ಬಿಡಿಸಿಕೊಳ್ಳಲು ಪ್ರಯತ್ನಿಸಿದರು.

"ನನ್ನ ದೃಷ್ಟಿಯಲ್ಲಿ ನಿಮಗಿಂತ ಶ್ರೇಷ್ಠರು ಯಾರೂ ಇಲ್ಲ. ನನ್ನ ಮೇಲೆ ದಯೆ ತೋರಿಸಿರಿ." ಕಾಲು ಹಿಡಿದಿದ್ದಂತೆಯೇ ಬಿಲ್ಲೇಸುರರು ಕಾಲ ಮೇಲೆ ಹಣೆಯೂರಿದರು.

"ನನಗಂತೂ ಯಾವ ಗುರುಮಂತ್ರವೂ ಬರುವುದಿಲ್ಲ. ಬರಿಯ ಗಾಯತ್ರಿ ಬರುತ್ತದೆ."

ಕಲಕಿದಂತಾಗಿ ಹೇಳಿದರು.

"ತಂದೆ, ಗಾಯತ್ರಿಗಿಂತ ಶ್ರೇಷ್ಠವಾದ ಗುರುಮಂತ್ರ ಬೇರೊಂದಿಲ್ಲ. ನನಗೆ ಅದನ್ನೇ ಹೇಳಿಕೊಡಿರಿ."

"ಅರೆ, ಉಪನಯನದ ಸಮಯದಲ್ಲಿ ಗಾಯತ್ರಿಯನ್ನು ನೀನು ಕೇಳಿಯೇ ಇರಬೇಕಲ್ಲ."

"ನನಗೆ ಮರೆತು ಹೋಗಿದೆ. ನಿಮ್ಮ ಕಾಲು ಮುಟ್ಟಿ ಹೇಳುತ್ತೇನೆ. ನಿನ್ನೆ ನನ್ನ ಕನಸಿನಲ್ಲಿ ಜಗನ್ನಾಥದೇವರು ಹೇಳಿದರು.... ಆದರೆ ಬಾಯಿ ಬಿಟ್ಟು ಹೇಳಿದರೆ ಕನಸು ಫಲಿಸುವುದಿಲ್ಲ."

ಕನಸಿನ ಸುದ್ದಿ ಕೇಳಿ ಸತ್ತೀದೀನರ ಹೆಂಡತಿ ರೋಮಾಂಚಿತಳಾದಳು. ಬಿಲ್ಲೇಸುರರು ಪಣವನ್ನು ಗೆದ್ದೇ ಬಿಟ್ಟರೆಂದು ಆಕೆಗನಿಸಿತು. ಆಕೆ ಕೂಗಿ ಹೇಳಿದಳು, "ಬಿಲ್ಲೇಸುರ, ಕಾಲು ಬಿಡು. ನಿನಗೆ ದೇವರ ಕನಸಾಗಿದೆ, ಅಂದಮೇಲೆ ನಾನೇ ಹೇಳುವೆ ತಗೋ, ಜಮಾದಾರರು ಗುರುಮಂತ್ರ ಉಪದೇಶಿಸುತ್ತಾರೆ. ಇಲ್ಲಿ ಬಾ, ಏನು ಕನಸಾಯಿತೆಂದು ನನಗೊಬ್ಬಳಿಗೇ ಹೇಳು ಬಾ."

ಆಕೆ ಮಾತು ಕೊಟ್ಟೊಡನೆ ಬಿಲ್ಲೇಸುರರು ಕಾಲು ಬಿಟ್ಟರು. ಸತ್ತೀದೀನರ ಹೆಂಡತಿ ಕೊಠಡಿಯ ಕಡೆ ಹೆಜ್ಜೆ ಹಾಕಿದಳು. ಬಿಲ್ಲೇಸುರರೂ ಜೊತೆಗೇ ಹೋದರು. ಅಲ್ಲಿ ಹೋಗಿ ಹೇಳಿದರು, "ನಾನು ಮಲಗಿದ್ದೆ, ಮಲಗಿದ್ದ ಹಾಗೆಯೇ ನೋಡಿದೆ, ಭುಸ್ಸೆಂದು ಬೆಂಕಿಯ ಜ್ವಾಲೆ ಮೇಲೆದ್ದಿತು, ಅದರಲ್ಲಿ ಮೂರು ತಲೆಗಳ ಒಬ್ಬ ಮನುಷ್ಯ ಕೂತಿದ್ದ, ಆತ ಹೇಳಿದ, ಬಿಲ್ಲೇಸುರ, ನೀನು ಬಡ ಬ್ರಾಹ್ಮಣನಿದ್ದೀ, ತೊಂದರೆ ಅನುಭವಿಸಿದ್ದೀ, ಆದರೆ ಭಯಪಡಬೇಡ, ನೀನು ಯಾರೊಂದಿಗೆ ಬಂದಿರುವಿಯೋ ಅವರ ಸೇವೆ ಮಾಡು, ಅವರಿಂದಲೇ ಗುರುಮಂತ್ರ ಪಡೆದುಕೋ, ನೀನು ಹಾಲು-ಮೊಸರಿನಿಂದ ಸಮೃದ್ಧಿ ಹೊಂದುವಿ. ಕಣ್ಣು ತೆರೆದು ನೋಡಿದರೆ ಏನೂ ಇಲ್ಲ."

ಫಲವು ತಿರುವು ಮುರುವಾಯಿತಲ್ಲ ಎನಿಸಿತು ಸತ್ತೀದೀನರ ಹೆಂಡತಿಗೆ. ವಾಸ್ತವವಾಗಿ ಈ ಕನಸು ಆಕೆಗೆ ಬೀಳಬೇಕಿತ್ತು. ಏನಾದರೂ ತಪ್ಪಾಗಿರಬಹುದು. ಪ್ರತಿ ಸೋಮವಾರ ದೇವರ ಹೆಸರಿನಲ್ಲಿ ತುಪ್ಪದ ದೀವಿಗೆ ಹಚ್ಚಬೇಕೆಂದು ಸಂಕಲ್ಪಿಸಿದಳು. ಬಳಿಕ ಮಂತ್ರೋಪದೇಶ ಮಾಡಲು ಗಂಡನನ್ನು ಕೇಳಿಕೊಂಡಳು. ಸತ್ತೀದೀನರು ಜಪಮಾಲೆ, ಸಿಹಿ, ಅಂಗವಸ್ತ್ರ ಇತ್ಯಾದಿಗಳನ್ನು ಪೇಟೆಯಿಂದ ಕೊಂಡುತರಲು ಬಿಲ್ಲೇಸುರರಿಗೆ ಹೇಳಿದರು. ಬಿಲ್ಲೇಸುರರು ಕೆಲವೇ ಕ್ಷಣಗಳಲ್ಲಿ ಹೋಗಿ ಅವನ್ನೆಲ್ಲ ತಂದರು. ಸತ್ತೀದೀನರು ಬಿಲ್ಲೇಸುರರಿಗೆ ಪುನಃ ಒಮ್ಮೆ ಗಾಯತ್ರಿ ಮಂತ್ರೋಪದೇಶ ಮಾಡಿ ದೀಕ್ಷೆ ಕೊಟ್ಟರು.

ಬಿಲ್ಲೇಸುರರ ಕಣ್ಣುಗಳಲ್ಲಿ ತುಳುಕುತ್ತಿದ್ದ ಶ್ರದ್ಧೆಯಿಂದ ಸತ್ತೀದೀನರ ಹೆಂಡತಿ ಪ್ರಭಾವಿತಳಾದಳು. ಬಿಲ್ಲೇಸುರರಿಗೆ ಹೋಲಿಸಿದಾಗ ತಾನು ಪಡೆದ ದೇವರದರ್ಶನ ವ್ಯರ್ಥವೆಂದು ಆಕೆಗನಿಸಿತು. ಆಕೆ ಜಮಾದಾರರಿಗೆಂದಳು, "ಜಮಾದಾರರೆ, ನಾನೂ ಯಾಕೆ ಮಂತ್ರ ದೀಕ್ಷೆ ಪಡೆಯಬಾರದು?" ಜಮಾದಾರರೆಂದರು, "ಸರಿ, ಪಂಡಾಜಿ ಬರಲಿ, ಕೇಳೋಣ." ದೇವರಿಚ್ಛೆಯಿಂದ ತುಸು ಹೊತ್ತಿನಲ್ಲೇ ಪಂಡಾಜಿ ಅಲ್ಲಿಗೆ ಬಂದರು. ಸತ್ತೀದೀನರು ಕೇಳಿದರು. ಪಂಡಾಜಿ ಸತ್ತೀದೀನರ ಹೆಂಡತಿಯನ್ನು ನೋಡಿ ಹೇಳಿದರು, "ಈಗಲೇ ನೀನು ಈ ಮಂತ್ರ ಪಡೆದುಕೊಳ್ಳಲಾರೆ. ಈಗಿನ್ನೂ ನಿನಗೆ ಪ್ರತಿ ತಿಂಗಳು ಮುಟ್ಟು

ಇರುವುದು".

ಸತ್ತೀದೀನರ ಹೆಂಡತಿ ಸೋತದೃಷ್ಟಿಯಿಂದ ನೋಡುತ್ತಲಿದ್ದಳು. ನಾಲ್ಕನೆಯ ದಿನ ಗುರುಮಂತ್ರ ಪಡೆದರೆ ಲಾಭದಾಯಕವಾಗುವುದೆಂದು ಪಂಡಾಜಿ ಸತ್ತೀದೀನರಿಗೆ ಸಲಹೆಯಿತ್ತರು. "ಎಲ್ಲಿಯವರೆಗೆ ಸ್ತ್ರೀ ಮುಟ್ಟಾಗುತ್ತಾಳೋ ಅಲ್ಲಿಯವರೆಗೆ ಆಕೆ ಮಂತ್ರವನ್ನು ರಕ್ಷಿಸಲಾರಳು, ಅಶುದ್ಧಳಾಗಿರುತ್ತಾಳೆ ಮತ್ತು ವಿವಿಧ ರೀತಿಗಳಿಂದ ಆಕೆ ಕಾಲುಜಾರುವ ಸಂಭವವಿರುತ್ತದೆ." ಸತ್ತೀದೀನರು ಸರಿ ಅಂದರು.

ಅಲ್ಲಿಂದ ಭುವನೇಶ್ವರಕ್ಕೆ ಹೋದರು, ಬಳಿಕ ಬರದ್ವಾನಕ್ಕೆ ವಾಪಸು ಬಂದರು.

## ಐದು

ಸತ್ತೀದೀನರ ಹೆಂಡತಿ ಒಂದು ವರ್ಷದವರೆಗೂ ಜಗನ್ನಾಥದೇವರ ಶಕ್ತಿಯ ಪರೀಕ್ಷೆ ಮಾಡುತ್ತಲಿದ್ದಳು. ಪ್ರತಿ ಸೋಮವಾರ ತುಪ್ಪದ-ದೀವಿಗೆ ಹಚ್ಚುತ್ತಿದ್ದಳು; ಪ್ರತಿ ತಿಂಗಳ ಕೊನೆಯವರೆಗೂ ಕಾಯುತ್ತಿದ್ದಳು. ಆದರೆ ಏನೂ ಫಲವಾಗಲಿಲ್ಲ.

ಬಿಲ್ಲೇಸುರರ ಕ್ರಿಯೆ-ಕಾಷ್ಠಾದಿಗಳು ಹೆಚ್ಚಾಗುತ್ತಲೇ ಹೋದವು. ತಿಲಕ, ಮಾಲೆ ಮತ್ತು ಗಾಯತ್ರಿಯ ಫಲವಾಗಿ ಅವರ ತೇಜಸ್ಸು ದಿನದಿನವೂ ವರ್ಧಿಸುತ್ತ ಹೋಯಿತು.

ಒಂದು ವರ್ಷ ಕಳೆದರೂ ಮಗು ಹುಟ್ಟುವ ಬಗ್ಗೆ ಜಗನ್ನಾಥದೇವರ ಕೃಪೆ ಆಗದಿರಲು ಸತ್ತೀದೀನರ ಹೆಂಡತಿಗೆ ದೇವರ ಮೇಲೆ ಸಿಟ್ಟು ಉಕ್ಕೇರಿತು, ಆಕೆ ದಿವ್ಯಶಕ್ತಿಯ ಗೊಡವೆ ಬಿಟ್ಟು ಮನುಷ್ಯ ಶಕ್ತಿಯ ಪಕ್ಷ ಹಿಡಿದಳು; ಯಥಾರ್ಥವಾದಿ ಲೇಖಕನ ಹಾಗೆ.

ಬಿಲ್ಲೇಸುರರಿಗೆ ಬಹಳ ನೋವಾಯಿತು. ಜನರು ಅವರ ಗುರುಮಂತ್ರದ ಬಗ್ಗೆ ಹಾಸ್ಯ ಮಾಡುತ್ತಿದ್ದರು. ಅವರ ಪರಿಸ್ಥಿತಿಯಲ್ಲಿ ಏನೂ ಸುಧಾರಣೆ ಆಗಲಿಲ್ಲ. ಅವರು ನಿಶ್ಚಯಿಸಿಬಿಟ್ಟರು. ಇನ್ನು ಊರಿಗೆ ತಿರುಗಿ ಹೋಗುವುದೇ ಸರಿ, ಜಮೀನ್ದಾರನ ಗುಲಾಮಗಿರಿಗಿಂತ ಗುರುವಿನ ಗುಲಾಮಗಿರಿ ಒಳ್ಳೆಯದು, ಇಲ್ಲಿಗಿಂತ ಅಲ್ಲಿಯ ಹವೆ-ನೀರು ಒಳ್ಳೆಯದು, ಹೇಳಿ-ಕೇಳಿ ಮಾಡಲು ತನ್ನವರೆನ್ನುವ ಜನ ಇದ್ದಾರೆ, ಇನ್ನು ಇಲ್ಲಿರಬಾರದು.

ಗುರುಪತ್ನಿಯ ಯಥಾರ್ಥವಾದವೂ ಬಿಲ್ಲೇಸುರರಿಗೆ ಹಿಡಿಸಲಿಲ್ಲ. ಒಂದು ದಿನ ಅವರು ತಮ್ಮ ಕಂಠಿಮಾಲೆಯನ್ನು ತೆಗೆದುಕೊಂಡು ಹೋಗಿ ಗುರುಪತ್ನಿಯೆದಿರು ಇಟ್ಟು ಹೇಳಿದರು, "ನಾನು ಊರಿಗೆ ಹೋಗಲು ರಜೆ ಪಡೆದಿದ್ದೇನೆ. ತಿರುಗಿ ಬರುವೆನೋ ಇಲ್ಲವೋ. ಹೇಳುವುದು ಇನ್ನೇನಿದೆ, ಈ ಜಪಮಾಲೆ ಮತ್ತು ಈ ಕಂಠಿ ಎರಡನ್ನೂ ತೆಗೆದುಕೊಳ್ಳಿರಿ. ನಾನಿನ್ನು ಸೇವಕನಾಗಿ ಇರುವುದಿಲ್ಲ. ಗುರುಗಳು ಇದ್ದ ಹಾಗೆಯೇ ನೀವೂ ಸಹ, ಈ ಮಂತ್ರ ನಿಮ್ಮದೇ!"

ಅಷ್ಟೆಂದು ಗಾಯತ್ರಿ ಮಂತ್ರದ ಆವೃತ್ತಿ ಮಾಡಿ ಒಂದು ಸಲ ಪಠಿಸಿ ಹೊರಟುಬಿಟ್ಟರು. ಬಗ್ಗಿ ನಮಸ್ಕರಿಸಲೂ ಇಲ್ಲ.

## ಆರು

ಬಿಲ್ಲೇಸುರರು ಊರಿಗೆ ಬಂದರು. ಗಂಟಿನಲ್ಲಿ ಹಣವಿತ್ತು, ತುಟಿಗಳಲ್ಲಿ ಮುಗುಳ್ನಗೆ. ಊರಿನ ಜಮೀನ್ದಾರ, ನೆರೆಹೊರೆಯ ದೊಡ್ಡಮನುಷ್ಯರು, ಎಲ್ಲರ ಕಣ್ಣುಗಳೂ ಕುಕ್ಕಿದವು-ಎಲ್ಲರ ಕಲ್ಪನೆಗಳೂ ಕುಣಿಯತೊಡಗಿದವು- "ಎಷ್ಟೊಂದು ಹಣ ತಂದಿದ್ದಾನೆ." ಜನಗಳ ಮನಸ್ಸಿನಾಳದ ಬಯಕೆಯಲ್ಲಿ ಅವ್ಯಕ್ತವಾದ ಧ್ವನಿಯಿತ್ತು-ಬಿಲ್ಲೇಸುರರಿಂದ ಹಣ ದೂರವಾಗಲಿ ಎಂದು. ರಾತ್ರಿ ಕೋಲಿನ ಸಹಾಯದಿಂದ ಮನೆಮಾಳಿಗೆಯೇರಿ, ಅಂಗಳದಲ್ಲಿ ಇಳಿದು, ಅಲ್ಲಿಟ್ಟ ಸಾಮಾನುಗಳನ್ನೂ ಬಟ್ಟೆಬರೆಗಳನ್ನೂ ಎತ್ತಿಕೊಂಡು ಪಾರಾಗುವಂತಹ ಕಳ್ಳರು ಅವಕಾಶ ಸಿಕ್ಕರೆ ಒಂದು ಕೈ ನೋಡೋಣವೆಂದು ಹೊಂಚುಹಾಕತೊಡಗಿದರು. ಒಂದು ದಿನ ಸುಬೇದಾರರಾದ ತ್ರಿಲೋಚನರು ಸಿಕ್ಕರು, ತಮ್ಮ ಅನುಭವೀ ಕಣ್ಣುಗಳಿಂದ ಬಿಲ್ಲೇಸುರರನ್ನು ನೋಡುತ್ತಾ ಬಹಳ ಆತ್ಮೀಯತೆಯಿಂದ ಮಾತುಕತೆಗೆ ತೊಡಗಿದರು, "ಏನು ಬಿಲ್ಲೇಸುರ, ಈಗಲಾದರೂ ಊರಲ್ಲಿರುವ ವಿಚಾರವಿದೆಯೋ ಅಥವಾ ಮತ್ತೆ ಹೊರಟು ಹೋಗುತ್ತೀಯೋ?"

ಬಿಲ್ಲೇಸುರರಿಗೆ ತ್ರಿಲೋಚನರ ಅಪ್ಪನ ಇತಿಹಾಸವೂ ಬಾಯಿಪಾಠವಿತ್ತು, ಹಿಂದಿಯ ಶ್ರೇಷ್ಠ ಸರಳರಗಳೆಯ ಕವಿಯ ಹಾಗೆ ಸಮ್ಮೇಳನದಲ್ಲೋ ಅಥವಾ ಮನೆಗಳಲ್ಲಿ ನಡೆಯುವ ಗೋಷ್ಠಿಗಳಲ್ಲೋ ಅದನ್ನು ಬಹಿರಂಗವಾಗಿ ಹೇಳುತ್ತಿರಲಿಲ್ಲ, ಅಷ್ಟೆ. ಮುಗುಳ್ನಕ್ಕು ವಿನಯದಿಂದ ಉತ್ತರಿಸಿದರು, "ಅಣ್ಣಾ, ಇನ್ನು ಊರಲ್ಲೇ ಇರುವ ವಿಚಾರವಿದೆ. ಬಂಗಾಳದ ನೀರಿನೊಂದಿಗೆ ನಂಟು ಅಂಟಿಕೊಂಡುಬಿಟ್ಟಿದೆ."

ತ್ರಿಲೋಚನರ ಮೂರನೇ ಕಣ್ಣಲ್ಲಿ ಹೆಚ್ಚಿನ ಹೊಳಪು ಬಂದಿತು. ಒಂದು ಹೆಜ್ಜೆ ಮುಂದಿರಿಸಿ ಇನ್ನೂ ಸನಿಹ ಬಂದು, ಆತ್ಮೀಯ ಗೆಳೆಯನ ಸಹಾನುಭೂತಿಸೂಚಕ ಧ್ವನಿಯಲ್ಲಿ ಹೇಳಿದರು, "ಬಹಳ ಒಳ್ಳೆಯದು, ಬಹಳ ಒಳ್ಳೆಯದು. ಯಾವ ಕೆಲಸ ಮಾಡುವಿ?"

"ಇನ್ನೂ ಏನೂ ಯೋಚಿಸಿಲ್ಲ" ಬಿಲ್ಲೇಸುರರು ನಗುತ್ತಲೇ ಹೇಳಿದರು.

"ಸೆಲೆಗಳಿಲ್ಲದ ಬಾವಿ ಬತ್ತಿ ಹೋಗುತ್ತದೆ. ಎಷ್ಟು ದಿನ ಕೂತು ತಿನ್ನಬಲ್ಲೆ?"

"ನಿಜವಾಗಿ ಹೇಳುತ್ತಿದ್ದೇನೆ, ಈಗಂತೂ ಹೀಗೆಯೇ ದಿನಗಳು ಕಳೆದು ಹೋಗುತ್ತಿವೆ."

"ಹಾಗನ್ನಬೇಡ. ಊರಿನ ಜನ ಮಹಾ ಲಫಂಗರು. ಪೋಲೀಸರಿಗೆ ರಿಪೋರ್ಟು ಮಾಡಿದರೆ ಬದ್ಮಾಷರ ಪಟ್ಟಿಯಲ್ಲಿ ಹೆಸರು ಸೇರಬಹುದು. ಹೇಳು, ಗಳಿಸಿ ತಂದಿದ್ದು ಖರ್ಚಾದರೆ ಮತ್ತೆ ಗಳಿಸಿಕೊಂಡು ಬರುವಿ ಅಲ್ಲವೆ."

ಬಿಲ್ಲೇಸುರರು ಗೊಂದಲಕ್ಕೊಳಗಾದರು. "ಹೌದಣ್ಣಾ, ಈ ದಿನಗಳಲ್ಲಿ ಹೋಮ ಮಾಡುವಾಗಲೂ ಕೈ ಸುಡುತ್ತದೆ. ಏನೂ ಇಲ್ಲದಿದ್ದರೆ ಹೇಗೆ ತಿನ್ನುತ್ತಿದ್ದಾನೆಂದು ಜನ ಯೋಚಿಸುತ್ತಾರೆ, ಕಳ್ಳತನ ಮಾಡುತ್ತಾನೆಂದು ಅಂದುಕೊಳ್ಳಬಹುದು."

ತ್ರಿಲೋಚನರೆಂದುಕೊಂಡರು. ಮೊದಲ ದರ್ಜೆಯ ಚಾಲಾಕಿತನವಿದೆ ಇವನಲ್ಲಿ, ಏನೂ ಎಲ್ಲೂ ಬಿಟ್ಟುಕೊಡುತ್ತಿಲ್ಲ. ಬಹಿರಂಗದಲ್ಲಿ ಅಂದರು, "ಹ್ಞಾ, ದೀನಾನಾಥರು ಹೀಗೇ ಏನೋ ಅಲ್ಲಸಲ್ಲದ್ದನ್ನು ಮಾತಾಡುತ್ತಿದ್ದರು, ಈಗ ಬದ್ಮಾಷರ ಪಟ್ಟಿಯಲ್ಲಿ

ಸೇರಿಬಿಟ್ಟಿದ್ದಾರೆ, ರಾತ್ರಿ ಹೊತ್ತು ಅವರ ಮೇಲೆ ಕಣ್ಣಿಡಲಾಗುತ್ತದೆ.''

ಆದರೂ ಬಿಲ್ಲೇಸುರರು ಸಿಕ್ಕಿಹಾಕಿಕೊಳ್ಳಲಿಲ್ಲ. ''ಪೋಲೀಸರು ಕಣ್ಣುಗಳನ್ನು ನೋಡಿಯೇ ತಿಳಿದುಕೊಂಡುಬಿಡುತ್ತಾರೆ-ಯಾರು ಕೆಟ್ಟವರು, ಯಾರು ಒಳ್ಳೆಯವರು, ಎಂದು. ನನ್ನ ಹೊಲವನ್ನು ರಾಮದೀನನಿಗೆ ಉಳುಮೆ ಮಾಡಲು ಕೊಟ್ಟು ಹೋಗಿದ್ದೆ. ಅದನ್ನೇ ತಿರುಗಿ ಪಡೆದು ಒಕ್ಕಲುತನ ಮಾಡುವೆ'' ಎಂದರು.

ತ್ರಿಲೋಚನರಿಗೆ ತುಸು ಹಿಡಿತ ಸಿಕ್ಕಿತು. ''ಹ್ಹಾ, ಇದಂತೂ ಒಳ್ಳೆಯ ವಿಚಾರ. ಆದರೆ ನಿನಗೆ ಎತ್ತುಗಳಿಲ್ಲವಲ್ಲ, ಒಕ್ಕಲುತನ ಹೇಗೆ ಮಾಡುತ್ತೀ?'' ಎಂದರು.

ಬಿಲ್ಲೇಸುರರು ಪೇಚಿಗೆ ಸಿಕ್ಕರು. ''ಅದಕ್ಕೇ ಹೇಳಿದ್ದು, ಇನ್ನೂ ಏನೂ ನಿಶ್ಚಯಿಸಿಲ್ಲ ಅಂತ'' ಎಂದರು.

ತ್ರಿಲೋಚನರು ಇನ್ನೂ ತುಸು ಅಲುಗಾಡಿಸಿ ನೋಡಬೇಕೆಂದುಕೊಂಡು, ಆದರೆ ಹಾಗೆ ಮಾಡಿದರೆ ಏನಾದರೊಂದು ಬಿರುಸು ಮಾತು ಕೇಳಿ ದೂರವಾಗುವುದರ ಹೊರತು ಬೇರಿನ್ನೇನೂ ಸ್ವಾರ್ಥ ಸಾಧಿಸಿಕೊಳ್ಳಲಾಗದು, ಎಂದು ಯೋಚಿಸಿ ಕಷ್ಟಪಟ್ಟು ತಮಗನಿಸಿದ್ದನ್ನು ಹೇಳುವುದನ್ನು ತಡೆದುಕೊಂಡರು. ತುಂಬಾ ಧೈರ್ಯದಿಂದ ಹೇಳಿದರು, ''ನಮ್ಮ ಎತ್ತುಗಳನ್ನು ತೆಗೆದುಕೊಳ್ಳಬಹುದಲ್ಲ.''

''ಆಮೇಲೆ ನೀವೇನು ಮಾಡುವಿರಿ?''

''ನಾವು ಇನ್ನೂ ದೊಡ್ಡ ಎತ್ತುಗಳನ್ನು ಕೊಳ್ಳಬೇಕೆಂದಿದ್ದೇವೆ. ಆದರೆ ನೀವಂತೂ ನೂರು ರೂಪಾಯಿಗಳನ್ನಾದರೂ ಕೊಡಬೇಕು.''

ನೂರು ರೂಪಾಯಿ ಹೆಚ್ಚಲ್ಲವೆಂದು ಯೋಚಿಸಿ ಬಿಲ್ಲೇಸುರರು ಹೇಳಿದರು, ''ಸರಿ, ನಾಳೆ ಹೇಳುತ್ತೇವೆ.''

ತ್ರಿಲೋಚನರು ಏನೋ ಕೆಲಸವಿದೆಯೆಂದು ಹೇಳಿ ಹೊರಟು ಹೋದರು. ಒಂದೇ ಬಾರಿಗೆ ನೂರು ರೂಪಾಯಿ ಕೊಡಲು ತಯಾರಾದ ಬಿಲ್ಲೇಸುರರ ಬಳಿ ಆರೇಳು ನೂರು ರೂಪಾಯಿಗಳಾದರೂ ಇರಲೇಬೇಕೆಂದು ಮನಸ್ಸಿನಲ್ಲಿ ಅಂದುಕೊಂಡರು. ಯಾವ ಉಪಾಯದಿಂದ ಆ ಹಣವನ್ನು ದಕ್ಕಿಸಿಕೊಳ್ಳಬಹುದು ಎಂದು ವಿಚಾರವಿಮರ್ಶೆ ಮಾಡಲು ತ್ರಿಲೋಚನರು ಬೇರೊಂದು ಕಡೆ ಹೋದರು.

ತ್ರಿಲೋಚನರು ಹೋದೊಡನೆ ಮನೆಯೊಳಗಡೆ ಹೋದ ಬಿಲ್ಲೇಸುರರು ತುಸು ಹೊತ್ತಿನಲ್ಲೇ ತಯಾರಾಗಿ ಹೊರಗಡೆ ಹೊರಟರು. ಜನ ಕೇಳಿದರು- ಎಲ್ಲಿಗೆ ಹೊರಟಿದ್ದೀರಿ ಬಿಲ್ಲೇಸುರ? ಬಿಲ್ಲೇಸುರರು ಹೇಳಿದರು-ಪಟವಾರಿಯ ಕಡೆ.

ಸಂಜೆಯಾಗುತ್ತಿದ್ದಂತೆ ಜನರೆಲ್ಲ ಕಂಡದ್ದೇನು-ಮೂರು ದೊಡ್ಡ ಗಬ್ಬದ ಆಡುಗಳನ್ನು ಹೊಡೆದುಕೊಂಡು ಬಿಲ್ಲೇಸುರರು ಬರುತ್ತಿದ್ದಾರೆ. ಊರಲ್ಲೆಲ್ಲ ಸುದ್ದಿಯಾಯಿತು- ಬಿಲ್ಲೇಸುರರು ಮೂರು ಆಡುಗಳನ್ನು ತಂದಿದ್ದಾರೆ. ಎಲ್ಲರೂ ನಿಡಿದಾದ ನಿಟ್ಟುಸಿರು ಬಿಟ್ಟರು

ಆಡುಗಳ ಸುದ್ದಿ ಕೇಳಿ ತ್ರಿಲೋಚನರು ಮತ್ತೆ ಬಂದರು. ''ಆಡು ತಂದೆಯಾ, ಒಳ್ಳೆಯದು ಮಾಡಿದೆ. ಈಗ ಸಾಕಷ್ಟು ಪಶುಸಂಪತ್ತಾಗುವುದು.'' ಎಂದರು. ಬಿಲ್ಲೇಸುರೆಂದರು, ''ಹ್ಹಾ, ಎತ್ತುಗಳ ವಿಚಾರವನ್ನು ಸದ್ಯಕ್ಕೆ ಕೈಬಿಟ್ಟಿದ್ದೇನೆ, ಅವುಗಳ ನೀರು-ನಿಡಿ ನೋಡುವವರ್‍ಯಾರು?

ಆಡುಗಳಿಗಾದರೋ ಸೊಪ್ಪು ಸದೆ ಕಿತ್ತು ಹಾಕುವೆ. ಎತ್ತುಗಳನ್ನು ಸಾಕಿಕೊಂಡರೆ ಎತ್ತಿನ ಹಾಗೆಯೇ ಚಾಕರಿ ಮಾಡಬೇಕಾಗುತ್ತದೆ.''

''ಮತ್ತೆ ಒಕ್ಕಲುತನ?''

''ಹೇಗೂ ಪಾಲು ಕೊಟ್ಟಿರುವೆ, ಒಪ್ಪಂದ ಮಾಡಿಕೊಳ್ಳುವೆ.''

## ಏಳು

ಬಿಲ್ಲೇಸುರರು ದಾರಿಯಲ್ಲಿ ಅತ್ತಿಯ ಮರದ, ಅರಳಿಯ ಮರದ, ಗೂರಲು ಮರದ ಟೊಂಗೆಗಳನ್ನು ಕಡಿದು ಹಾಕಿ ಆಡುಗಳಿಗೆ ಮೇಯಿಸಲೆಂದು ಒಂದು ಉದ್ದನ್ನ ತೆಳ್ಳಗಿನ ಬಿದಿರಿನ ಗಳಕ್ಕೆ ಕುಡುಗೋಲು ಸಿಕ್ಕಿಸಿದರು. ತಯಾರಿ ಮಾಡುತ್ತ ಹೊತ್ತು ಏರಿತು. ಬಿಲ್ಲೇಸುರರು ಆಡುಗಳನ್ನು ಹೊಡೆದುಕೊಂಡು ಊರ ದಾರಿಗುಂಟ ನಡೆದರು. ರಾಮದೀನರು ಭೆಟ್ಟಿಯಾಗಿ ಅಂದರು, ''ಬ್ರಾಹ್ಮಣನಾಗಿ ಆಡು ಸಾಕುವೆಯಾ? ಆದರೆ ಆಡುಗಳಂತೂ ತುಂಬ ಚೆನ್ನಾಗಿವೆ, ಸಾಕಷ್ಟು ಹಾಲು ಕೊಡಬಲ್ಲವು, ಇನ್ನು ಒಂದೆರಡು ವರ್ಷಗಳಲ್ಲಿ ಆಡುಗಳಿಂದ ಮನೆ ತುಂಬಿ ಹೋಗುವುದು, ಗಳಿಕೆಯೂ ಸಾಕಷ್ಟಾಗುವುದು.'' ಹಾಗೆಂದು ಆಸೆಗಣ್ಣುಗಳಿಂದ ಆಡುಗಳನ್ನು ನೋಡತೊಡಗಿದರು. ದಾರಿಯಲ್ಲಿ ತಿರುಗಿ ಉತ್ತರಿಸುವುದು ಅಷ್ಟೇನೂ ಸರಿಕಾಣದೆ ಬಿಲ್ಲೇಸುರರು ಹಾಗೇ ಉಸಿರು ಬಿಗಿಹಿಡಿದು ಮುಂದೆ ಹೋದರು. ಮನಸ್ಸಿನಲ್ಲಿ ಅಂದುಕೊಂಡರು, ''ಅವಶ್ಯಕತೆ ಬಿದ್ದಾಗ ಬ್ರಾಹ್ಮಣರು ನೇಗಿಲು ಹಿಡಿಯಬೇಕಾಯಿತು, ಚಪ್ಪಲಿಗಳ ಅಂಗಡಿ ತೆರೆಯಬೇಕಾಯಿತು, ಅಂದಮೇಲೆ ಆಡು ಕಾಯುವುದೇನು ಅಂಥ ಮಹಾ ಕೆಟ್ಟ ಕೆಲಸ?'' ಲಲಯಿ ಕುಂಬಾರ ತನ್ನ ಚಕ್ರವನ್ನು ತಿರುಗಿಸುತ್ತ ಕೂತಿದ್ದ, ಆಡುಗಳನ್ನು ನೋಡಿದವನೇ ಒಬ್ಬ ಕಾಮ್ರೇಡನ ಹಾಗೆ ಕೂಗು ಹಾಕಿ ಬಿಲ್ಲೇಸುರರನ್ನು ಹುರಿದುಂಬಿಸಿದನು. ಬಿಲ್ಲೇಸುರರು ಖುಶಿಯಾಗಿ ಮುಂದೆ ಹೋದರು. ಮುಂದೆ ಒಂದು ಗುಡಿ ಇತ್ತು. ಒಳಗೆ ಮಹಾದೇವರು, ಹೊರಗೆ ಮಹಾವೀರರು ಪ್ರತಿಷ್ಠಿತರಾಗಿದ್ದರು. ಬಿಲ್ಲೇಸುರರು ಗುರುಮಂತ್ರವನ್ನು ತ್ಯಜಿಸಿಬಿಟ್ಟಿದ್ದರೂ ಆಡುಗಳ ಒಳಿತಿಗಾಗಿ ಬೇಡಿಕೊಳ್ಳದೆ ಹಾಗೇ ಹೋಗುವುದು ಸಾಧ್ಯವಾಗದೆ ಗುಡಿಯೊಳಗೆ ಹೋದರು. ಅವರಿಗೆ ಮಹಾದೇವರಿಗಿಂತ ಮಹಾವೀರರೇ ಹೆಚ್ಚು ಶಕ್ತಿಶಾಲಿಗಳೆನಿಸಿತು ಅಥವಾ ಹೊರಗಡೆ ಮಹಾವೀರರ ಕಡೆ ಹೋಗುವುದರಿಂದ ಅವರಿಗೆ ಬೀದಿಯಲ್ಲಿ ಮುಂದೆ ಸಾಗುತ್ತಿದ್ದ ಆಡುಗಳನ್ನೂ ನೋಡಬಹುದು ಅನಿಸಿರಬೇಕು. ಸರಿ, ಮಹಾವೀರರ ಪಾದಗಳಿಗೆ ನಮಸ್ಕರಿಸಿ ಅವರು ಮನಸ್ಸಿನಲ್ಲೇ ಏನೋ ಅಂದುಕೊಂಡರು, ನಂತರ ಮತ್ತೆ ತಮ್ಮ ಆಡುಗಳನ್ನು ಹಿಂಬಾಲಿಸಿದರು. ಹೊಲಗಳ ಹಸಿರಿನ ಕಡೆ ಜಿಗಿಯುತ್ತಿದ್ದ ಆಡುಗಳನ್ನು ಜಬರಿಸಿ ಮುಂದೆ ಹೋಗುವಂತೆ ಮಾಡಿದರು. ಮನ್ನುವಿನ ಹಳೆಯ ಬಾವಿ ಬಂದಿತು. ದಾರಿಯಲ್ಲಿ ನಿಂತೇ ಗಳವನ್ನು ಮುಂದೆ ಚಾಚಿ ಕೆಳಗೆ ಬಾಗಿದ್ದ ಅರಳಿಯ ಟೊಂಗೆಗಳನ್ನು ಕಡಿಯತೊಡಗಿದರು. ಟೊಂಗೆಗಳು ಕೆಳಗೆ ಬೀಳುತ್ತಲೇ ಆಡುಗಳು ಎಲೆಗಳಿಗೆ ಮುಗಿಬಿದ್ದವು. ಸಾಕಷ್ಟು ಎಲೆಗಳನ್ನು ಕಡಿದು ಗುಡ್ಡೆಹಾಕಿ ಗಳವನ್ನು ಗಿಡಕ್ಕೆ ಆನಿಸಿ ನಿಲ್ಲಿಸಿ ಬಿಲ್ಲೇಸುರರು ಆಡುಗಳನ್ನು ಕಾಯುತ್ತ ಬಾವಿಯ ಕಟ್ಟೆಯನ್ನು ಏರಿ ಕುಳಿತರು.

ಎದುರಿಗೆ ಪಾಳುಬಿದ್ದ ಭೂಮಿಯಿತ್ತು. ದನಕಾಯುವ ಹುಡುಗರು ಅಲ್ಲಲ್ಲೇ ದನಗಳೊಂದಿಗೆ ನಿಂತಿದ್ದರು. ಬಿಲ್ಲೇಸುರರನ್ನು ನೋಡಿದರು. ಅವರ ಆಡುಗಳನ್ನೂ ನೋಡಿದರು. ಅವನ್ನು ಓಡಿಸಬೇಕೆಂಬ ಆಸೆಯಾಯಿತು. ಹುಡುಗರು ಉಪಾಯ ಯೋಚಿಸಿದರು. ಆಡುಗಳನ್ನು ಬೆನ್ನಟ್ಟಿ ಓಡಿಸಿ ಕಾಲುವೆಯಲ್ಲಿ ಬೀಳಿಸಬೇಕೆಂದು ನಿಶ್ಚಯಿಸಲಾಯಿತು. ಬಿಲ್ಲೇಸುರರು ಗಾಬರಿಯಾಗುವರು, ಎಲ್ಲ ಕಡೆ ಹುಡುಕುವರು. ಸಿಗುತ್ತವೆ, ಸಿಗುತ್ತವೆ; ದೈವಬಲವಿಲ್ಲದಿದ್ದರೆ ಸಿಗಲಿಕ್ಕೂ ಇಲ್ಲ. ಒಬ್ಬನೆಂದ-ಬೇಟೆಯಾಡುವವರಿಗೆ ತಿಳಿಸಿದರೆ ಕಾಲುವೆಯಲ್ಲೇ ಕೊಂದು ಹಾಕುತ್ತಾರೆ, ಒಂದಿಷ್ಟು ಮಾಂಸ ನಮಗೂ ಸಿಗಬಹುದಲ್ಲ. ಇನ್ನೊಬ್ಬನೆಂದ-ಗಬ್ಬದ ಆಡುಗಳು, ಇವುಗಳ ಮಾಂಸದಿಂದೇನು? ಆದರೂ ಆಡುಗಳನ್ನು ಓಡಿಸಬೇಕೆನ್ನುವ ಹಂಬಲವನ್ನು ಆ ಹುಡುಗರಿಂದ ಹತ್ತಿಕ್ಕಿಕೊಳ್ಳಲಾಗಲಿಲ್ಲ. ಯೋಚನೆ ಮಾಡಿ ಕೆಲವರು ಹೊರಗೇ ಉಳಿದರು, ಕೆಲವರು ಬಿಲ್ಲೇಸುರರ ಬಳಿ ಹೋದರು. ಒಬ್ಬನೆಂದ, "ಕಾಕಾ, ಬಾರಲ್ಲ, ಏನಾದರೂ ಆಟ ಆಡೋಣ." ಬಿಲ್ಲೇಸುರರು ಮುಗುಳ್ನಕ್ಕು ಅಂದರು, "ನಿಮ್ಮಪ್ಪನನ್ನು ಕರಕೊಂಡು ಬಾ ಹೋಗು, ನನ್ನ ಕೂಡಾ ನೀನೇನು ಆಡಬಲ್ಲೆ?" ಅಷ್ಟೆಂದು ಎಚ್ಚರದ ಕಣ್ಣಿನಿಂದ ಆಡು ಕಾಯತೊಡಗಿದರು. ಇನ್ನೊಬ್ಬನೆಂದ, "ಸರಿ ಕಾಕಾ, ಆಟ ಬೇಡವಾದರೆ ಬೇಡ; ಪರದೇಶಕ್ಕೆ ಹೋಗಿದ್ದೆಯಲ್ಲ, ಅಲ್ಲಿಯದೇನಾದರೂ ಸುದ್ದಿ ಹೇಳು." ಬಿಲ್ಲೇಸುರರೆಂದರು, "ಸ್ವತಃ ಸಾಯದೆ ಯಾರಿಗೂ ಸ್ವರ್ಗ ಕಾಣದು. ದೊಡ್ಡವರಾಗಿ ಪರದೇಶಕ್ಕೆ ಹೋಗಿ ಬರ್‍ರಿ, ಆಗ ಅದು ಹೇಗಿರುತ್ತದೆಂದು ತಾನೇ ತಿಳಿಯುತ್ತದೆ." ಈಗ ಮೂರನೆಯವನೆಂದ, "ಇಲ್ಲಿ ನಾವೆಲ್ಲ ಇದ್ದೇವೆ, ತೋಳದ ಭಯವಿಲ್ಲ. ಅಲ್ಲಿ ಮೇಲಿನ ಅಡವಿಯಲ್ಲಿ ಇರುತ್ತದೆ." ಬಿಲ್ಲೇಸುರರೆಂದರು, "ಇಲ್ಲಿಯೂ ಬರುತ್ತದೆ, ಮನುಷ್ಯನ ಹಾಗೆ ವೇಷ ಮರೆಸಿಕೊಂಡು."

ಅಷ್ಟೆಂದು ಬಿಲ್ಲೇಸುರರು ಎದ್ದರು. ಆಡುಗಳು ಎಲ್ಲಾ ಎಲೆಗಳನ್ನು ಕಬಳಿಸಿದ್ದವು. ತಟ್ಟನೆ ಹೋಗಿ, ಗಳ ಎತ್ತಿಕೊಂಡು ಅವಸರದಿಂದ ಬೇರೆ ಕಡೆ ಹೋದರು. ಪಾಳುಬಿದ್ದ ಭೂಮಿಯಾಚೆಗಿನ ಎತ್ತರದ ತೋಟದ ಕಡೆ ಹೋಗುತ್ತ ಒಂದಿಷ್ಟು ಹಸಿರಾದ ಎಲೆಗಳನ್ನು ಕಿತ್ತುಕೊಂಡರು. ಊರ ಕಡೆ ಹೊರಟಿದ್ದ ದೀನಾನಾಥರು ಸಿಕ್ಕಿದರು. ಆಸೆ ಬುರುಕ ಕಣ್ಣುಗಳಿಂದ ಆಡುಗಳನ್ನು ನೋಡುತ್ತ ಕೇಳಿದರು, "ಎಷ್ಟಕ್ಕೆ ಕೊಂಡುಕೊಂಡೇ?" ಬಿಲ್ಲೇಸುರರು ಬೇರೆಡೆ ನೋಡುತ್ತ ಹೇಳಿದರು, "ಅರ್ಧ ಬೆಲೆಗೆ ಅಡವಿಟ್ಟುಕೊಳ್ಳಲು ಸಿಕ್ಕಿವೆ."

ಬಿಲ್ಲೇಸುರರ ಈ ಭಾಗ್ಯದಿಂದ ದೀನಾನಾಥರ ರೋಮಗಳು ನಿಮಿರಿ ನಿಂತವು, ಬಹಳ ಆಶ್ಚರ್ಯವಾಯಿತು. ಕೇಳಿದರು, "ಮೂರೂ ಸೇರಿಯೆ?" ಬಿಲ್ಲೇಸುರರು ತಮ್ಮ ವಿಶಿಷ್ಟ ಮುಗುಳ್ನಗೆಯೊಂದಿಗೆ ಉತ್ತರಿಸಿದರು, " ಮತ್ತೆ ಒಂದೇ ಅಂದುಕೊಂಡಿರೇನು?" ದೀನಾನಾಥರು ಅಚ್ಚರಿಯಿಂದ ಕೇಳಿದರು, "ಅಂದರೆ ಆಡುಗಳು ನಿನ್ನವು, ಹಾಲು ನಿನಗೆ ಸೇರಿದ್ದು, ಸತ್ತರೆ ಮಾತ್ರ ಅವನ ಹೊಣೆಯೇ, ಮರಿಗಳು ಅರ್ಧ ಅರ್ಧ ಭಾಗವೇ?" ಬಿಲ್ಲೇಸುರರು "ಹೌದು" ಅಂದರು. ಬಿಲ್ಲೇಸುರರ ಈ ಅಸಂಭವವೆನಿಸುವ ಲಾಭದ ಹೊರೆಯಿಂದ ದೀನಾನಾಥರ ಸೊಂಟವೇ ಬಾಗಿದಂತಾಯಿತು. ತಗ್ಗಿದ ದನಿಯಿಂದ ಅಂದರು, "ದೇವರು ಕಣ್ತೆರೆದಂತಾಯಿತು." ಮನಸ್ಸಿನಲ್ಲಿ ಅಸೂಯೆಯಾಯಿತು. ಬಿಲ್ಲೇಸುರರು ಒಬ್ಬರೇ

ಇದೆಲ್ಲ ಸುಖ ಅನುಭವಿಸಬೇಕೆ? ಈ ಆಡುಗಳನ್ನು ನುಂಗಿ ನೀರುಕುಡಿಯದಿದ್ದರೆ ತಾನು ದೀನಾನಾಥನೇ ಅಲ್ಲ. ಬಿಲ್ಲೇಸುರರು ನೋಡಿದರು, ದೀನಾನಾಥರ ಹಣೆಯ ಮೇಲೆ ನಿರಿಗೆಗಳಿದ್ದವು, ಕಣ್ಣುಗಳಲ್ಲಿ ಉದ್ವೇಶ ಸ್ಪಷ್ಟವಾಗಿತ್ತು. ಜೀವನದ ದಾರಿಯಲ್ಲಿ ಬಿಲ್ಲೇಸುರರಿಗೆ ಯಾವಾಗಲೂ ಇಂತಹ ಅವಘಡಗಳೇ ಎದುರಾಗಿವೆ. ಒಮ್ಮೊಮ್ಮೆ ಪಾರಾಗಿದ್ದಾರೆ, ಒಮ್ಮೊಮ್ಮೆ ಸಿಕ್ಕಿಬಿದ್ದಿದ್ದಾರೆ. ಈಗ ಬಹಳ ಎಚ್ಚರದಿಂದಿರುತ್ತಾರೆ, ಯಾವಾಗಲೂ ದೃಷ್ಟಿ ನೇರವಾಗಿರುತ್ತದೆ. ಅಲ್ಲಿಂದ ಮುಂದೆ ನಡೆದು ಅತ್ತಿಯ ಗಿಡದ ಕೆಳಗೆ ಹೋದರು. ಒಂದಿಷ್ಟು ಎಲೆಗಳನ್ನು ಕತ್ತರಿಸಿ ಆಡುಗಳಿಗೆ ಮನೆಯಲ್ಲಿ ತಿನ್ನಿಸಲೆಂದು ಹೊರೆ ಕಟ್ಟಿಕೊಂಡರು. ಆಡುಗಳ ಹೊಟ್ಟೆ ತುಂಬಿದಾಗ ಹೊರೆಯನ್ನು ತಲೆಯ ಮೇಲೆ ಹೊತ್ತುಕೊಂಡು ಬೇರೆ ದಾರಿಯಿಂದ ಆಡುಗಳನ್ನು ಸಾಗಿಸಿಕೊಂಡು ಮನೆಗೆ ಹಿಂದಿರುಗಿದರು.

## ಎಂಟು

ಬಿಲ್ಲೇಸುರರ ಸ್ವಂತದ ಮನೆಯಲ್ಲಿ ಅನೇಕ ಪಾಲುಗಳಾಗಿದ್ದರಿಂದ ಆಡುಗಳೊಂದಿಗೆ ಅಲ್ಲಿರುವುದು ಸಾಧ್ಯವಿರಲಿಲ್ಲ. ಅಣ್ಣಂದಿರಿಗೆ ಕ್ಷಯರೋಗವೇನೂ ಇಲ್ಲದ್ದರಿಂದ ಆಡುಗಳ ವಾಸನೆಯೆಂದರೆ ಆಗುತ್ತಿರಲಿಲ್ಲ. ಎರಡನೆಯದಾಗಿ, ಮನೆ ಹಳೆಯದಾಗಿದ್ದರಿಂದ ಬಹಳ ಕಡೆ ಬಿದ್ದುಹೋಗಿತ್ತು. ರಾತ್ರಿ ತೋಳನ ರೂಪದಲ್ಲಿ ಕಳ್ಳರು ಬಂದು ಆಡುಗಳನ್ನು ಎತ್ತಿಕೊಂಡು ಹೋಗಬಹುದಿತ್ತು. ಹೀಗೆ ಅನೇಕ ಕಾರಣದಿಂದಾಗಿ ಬಿಲ್ಲೇಸುರರು ಊರಲ್ಲಿ ಖಾಲಿ ಬಿದ್ದಿದ್ದ ಒಂದು ಹಳೆಯ ಮನೆಯನ್ನು ಇರಲಿಕ್ಕೆಂದು ತೆಗೆದುಕೊಂಡರು. ಕೊಂಡುಕೊಳ್ಳಲಿಲ್ಲ; ಅದನ್ನು ಸಾರಿಸಿ, ಗುಡಿಸಿ ಮೆತ್ತಿಸಿ ಮನೆ ಬೀಳದ ಹಾಗೆ ನೋಡಿಕೊಂಡಿರುವೆನೆಂದು ಕರಾರು ಮಾಡಿ ತೆಗೆದುಕೊಂಡರು. ನೋಟೀಸು ಕೊಟ್ಟ ಆರು ತಿಂಗಳಲ್ಲಿ ಮನೆ ಖಾಲಿಮಾಡುವೆನೆಂದು ಒಪ್ಪಿದ್ದರು. ಮನೆಯ ಮಾಲೀಕರು ಪರದೇಶದಲ್ಲಿರುತ್ತಿದ್ದರು. ಮನೆ ಯಾರ ಸುಪರ್ದಿಯಲ್ಲಿತ್ತೋ ಅವರು ಹದಿನಾರಾಣೆ ಕಾಣಿಕೆ ಪಡೆದು ಬಿಲ್ಲೇಸುರರ ಮೇಲೆ ದಯೆ ತೋರಿದ್ದರು.

ಆ ಮನೆ ಪರದೇಶದಲ್ಲಿರುವವರದಾಗಿತ್ತೆಂದು ಬಹಳ ಚೆನ್ನಾಗಿತ್ತೆಂದೇನೂ ಅಲ್ಲ. ಪರದೇಶದವರು ಆ ಮನೆಯಲ್ಲಿರುತ್ತಿದ್ದಾಗ ಬಿಲ್ಲೇಸುರರ ಹಾಗೆ ದೇಶೀಯರೇ ಆಗಿದ್ದರು. ದೇಶದಲ್ಲಿನ ಬಡತನದ ಕಾರಣವಾಗಿಯೇ ಪರದೇಶಕ್ಕೆ ಹೋಗಿದ್ದರು. ಮನೆಯೆದುರು ಒಂದು ಹಾಳುಬಾವಿಯಿತ್ತು, ಮತ್ತು ಒಂದು ಹುಣಸೆಮರ. ಮಳೆಯ ನೀರಲ್ಲಿ ತೊಯ್ದ ಗೋಡೆಗಳು ಬಣ್ಣಗೆಟ್ಟು, ಬಿರುಕುಬಿಟ್ಟು ನಿಂತಿವೆ, ಗೋಡೆಗಳಿಂದಲೇ ಕಾಲುವೆ ಹರಿದ ಹಾಗೆ ಒಳಗಿನ ಮೋರಿಯ ಬಾಯಿ ಮುಚ್ಚಿದ್ದರಿಂದ ಮಳೆಯ ನೀರು ಹೊಸ್ತಿಲಿನ ಕಟ್ಟೆಯ ಕೆಳಗೆ ಮಡುಗಟ್ಟಿ ಹರಿದಿದೆ. ಬಿರುಕುಂಟಾಗಿದ್ದು ಅದರಲ್ಲಿ ದನಗಳು ನಾಯಿಗಳು ಸುಲಭವಾಗಿ ನುಗ್ಗಿ ಒಳಸೇರಬಹುದು. ಹೊಸ್ತಿಲಿನಾಚೆ ಜಗಲಿ ಎಲ್ಲಿಯೂ ಸಮಪಾತಳಿಯಿಲ್ಲ. ಅದರ ಮೇಲೆ ಮಲಗುವುದೇನು ಬಂತು, ಒಂದು ಮಂಚವನ್ನು ಹಾಕಲೂ ಬರುತ್ತಿರಲಿಲ್ಲ. ಮತ್ತೊಂದು ಕಡೆ ಒಂದು ಬಚ್ಚಲು ಮನೆ ಇತ್ತು, ಅದಕ್ಕೆ ಹೊಂದಿದಂತೆ ಒಂದು ಕೋಣೆ. ಬಿಲ್ಲೇಸುರರು

ಇಲ್ಲೇ ಬಂದು ಉಳಿದುಕೊಂಡರು. ಬಾಗಿಲ ಕೆಳಗಿನ ತಗ್ಗು ಮುಚ್ಚಿದರು. ನಿಧಾನವಾಗಿ ಮನೆಯ ಉಳಿದ ಭಾಗವನ್ನೂ ರಿಪೇರಿ ಮಾಡುತ್ತಲಿದ್ದರು.

ಒಂದು ಹೊತ್ತು ರೊಟ್ಟಿ ಬೇಯಿಸಿ ಎರಡೂ ಹೊತ್ತು ತಿನ್ನುತ್ತಿದ್ದರು. ಹೀಗೆ ಒಂದು ವರ್ಷಕ್ಕಿಂತ ಹೆಚ್ಚಿಗೆ ನಿಭಾಯಿಸಿದರು. ಅವರ ಕೆಲಸದ ವ್ಯಾಪ್ತಿ ಹೆಚ್ಚುತ್ತ ಹೋಯಿತು. ಆದರೆ ಅಡಚಣೆಗಳೇನೂ ತಪ್ಪಲಿಲ್ಲ. ಊರಲ್ಲಿ ಅದೆಷ್ಟು ಜನರಿದ್ದರು; ತನ್ನವರೆನ್ನುವವರು ಯಾರೂ ಇಲ್ಲ, ಶತ್ರುಗಳ ಕೋಟೆಯಲ್ಲಿ ಇದ್ದ ಹಾಗೆ ಅನಿಸುತ್ತಿತ್ತು. ಅಣ್ಣಂದಿರೂ ತಮ್ಮವರಲ್ಲ. ಒಬ್ಬರಿಗೊಬ್ಬರು ಯಾಕೆ ಆಗುವುದಿಲ್ಲೆಂದು ಬಿಲ್ಲೇಸುರರು ಯೋಚಿಸುತ್ತಿದ್ದರು. ಅದಕ್ಕೆಂದಿಗೂ ಉತ್ತರ ಸಿಗಲಿಲ್ಲ. ಬಹುಶಃ ಅವರಿಗೆ ಜಗತ್ತಿನ ನಿಜವಾದ ಅರ್ಥ ತಿಳಿದಿರಬೇಕು. ಆದರೂ ಜೀವವಿರುವವರೆಗೆ ಕೆಲಸ ಮಾಡಬೇಕು, ಆಸರೆ ಪಡೆದುಕೊಳ್ಳಬೇಕು, ಇದು ಸತ್ಯ. ತಮ್ಮ ಕಡೆ ಯಾರೂ ಗಮನ ಕೊಡುವುದಿಲ್ಲವಲ್ಲ, ಎಂಬ ಕೊರಗು ದೂರವಾಗಲಿಲ್ಲ; ಯಾರ ಮುಖವೂ ದೃಷ್ಟಿಗೆ ಬೀಳಲೊಲ್ಲದು. ನಮ್ಮ ಸಾಕ್ರೆಟಿಸ್‌ನಿಗೆ ಬಾಯಿ ಇರಲಿಲ್ಲ, ಆದರೆ ಅವನ ಫಿಲಾಸಫಿಯೇನೂ ಕಡಿಮೆ ದರ್ಜೆಯದಾಗಿರಲಿಲ್ಲ, ಯಾರೂ ಅವನ ವಿಚಾರಗಳನ್ನು ಕೇಳುತ್ತಿರಲಿಲ್ಲ, ಅಷ್ಟೆ. ಅವನಿಗೂ ಮರೆವಿನ ಲೋಕದಿಂದ ಹೊರಬರುವ ದಾರಿ ಕಂಡಿರಲಿಲ್ಲ, ಹೀಗಾಗಿ ಅವನು ಅಲೆಯುತ್ತಲೇ ಇದ್ದ.

ಇನ್ನೂ ಒಂದಷ್ಟು ಕಾಲ ಕಳೆಯಿತು. ಆಡುಗಳ ಜೊತೆಗೇ ಇರುತ್ತಿದ್ದರು. ಇಡೀ ಮನೆ ತುಂಬ ಆಡು ಮರಿಗಳು. ಮೊದಲಿನಿಂದಲೂ ಗಟ್ಟಿ ಜೀವ, ಆಡುಗಳ ಜೊತೆ ಇರತೊಡಗಿ ಇನ್ನೂ ಗಟ್ಟಿಯಾದರು. ಈಗಂತೂ ಅವರು ಕೊಂಡ ಆಡುಗಳಿಗೆ ಮೊಮ್ಮಕ್ಕಳು ಹುಟ್ಟಿದ್ದವು. ಕೆಲವು ಆಡುಗಳನ್ನು ಮಾರಿಯೂ ಇದ್ದರು. ಒಳ್ಳೆಯ ಉತ್ಪನ್ನವಾಗಿತ್ತು. ಊರಿನವರ ಕಣ್ಣಲ್ಲಿ ಇನ್ನೂ ಹೆಚ್ಚು ಒತ್ತತೊಡಗಿದ್ದರು. ಒಂದು ಸಲ ಊರಿನ ಕೆಲ ಜನರು ಬಿಲ್ಲೇಸುರರು ಊರಲ್ಲಿನ ಗಿಡಗಳನ್ನೆಲ್ಲ ಬೋಳು ಮಾಡಿದ್ದಾರೆಂದು ಜಮೀನ್ದಾರನ ಬಳಿ ದೂರನ್ನೊಯ್ದಿದ್ದರು, ಅವರ ಆಡುಗಳನ್ನೆಲ್ಲ ಮಾರಿಸಿಬಿಡಬೇಕೆಂದು ಒತ್ತಾಯಿಸಿದ್ದರು. ಜಮೀದ್ದಾರನು ಆಗಲಿ ಎಂದು ಹೇಳಿ ಅವರನ್ನು ಹುರಿದುಂಬಿಸಿ ಮಾತು ಹಾರಿಸಿದ್ದನು, ಯಾಕೆಂದರೆ ಈ ಮೊದಲೇ ಅವನ ಕಣ್ಣು ಬಿಲ್ಲೇಸುರರ ಆಡುಗಳ ಮೇಲೆ ಬಿದ್ದಿತ್ತು, ಮತ್ತು ಸರಕಾರಿ ಗಿಡಗಳನ್ನು ಕತ್ತರಿಸುತ್ತಿರುವುದಕ್ಕಾಗಿ ಈಗಾಗಲೇ ಅವನು ಬಿಲ್ಲೇಸುರರಿಂದ ನಿಗದಿಪಡಿಸಿದ ರಕಮನ್ನು ವಸೂಲು ಮಾಡುತ್ತಿದ್ದನು. ಮನಸ್ಸಿನೊಳಗಿನ ದ್ವೇಷವನ್ನು ಊರವರು ಬಿಲ್ಲೇಸುರರನ್ನು "ಕುರಿಗಾಹಿ" ಎಂದು ಕರೆದು ತೀರಿಸಿಕೊಳ್ಳತೊಡಗಿದರು. ಇದಕ್ಕುತ್ತರವಾಗಿ ಬಿಲ್ಲೇಸುರರು ಊರವರ ಹೆಸರುಗಳನ್ನೇ ತಮ್ಮ ಆಡುಗಳ ಮರಿಗಳಿಗೆ ಇಟ್ಟು ಕರೆಯತೊಡಗಿದರು.

## ಒಂಬತ್ತು

ಸ್ನಾನಮಾಡಿ ರೊಟ್ಟಿ ಬೇಯಿಸಿ-ತಿಂದು, ಸಂಜೆಗಿಷ್ಟು ಇಟ್ಟು, ಬಿಲ್ಲೇಸುರರು ಆಡುಗಳನ್ನು ಹೊಡೆದುಕೊಂಡು ಹೊರಟರು. ಹೆಗಲ ಮೇಲೆ ಅದೇ ಗಳ ಹೊತ್ತಿದ್ದರು. ನೇರಳೆಕಾಯಿಗಳು

ಹಣ್ಣಾಗತೊಡಗಿದ್ದವು. ಒಂದು ಟೊಂಗೆಯಲ್ಲಿ ಗಳವನ್ನು ತುರುಕಿ ಅಲ್ಲಾಡಿಸಿದರು. ಗಳದ ಒಂದು ತುದಿಗೆ ಹಗ್ಗವನ್ನು ಕಟ್ಟಿದ್ದರು. ಹಣ್ಣುಗಳು ಉದುರಿದವು. ಆರಿಸಿ ಅಂಗವಸ್ತ್ರದಲ್ಲಿ ಕಟ್ಟಿಕೊಂಡು ತಿನ್ನುತ್ತ ಓಣಿಗುಂಟ ಸಾಗಿದರು. ಎದುರಿಗೆ ಮಹಾವೀರಜಿಯ ಗುಡಿ ಕಾಣಿಸಿತು. ಮೇಲೆ ಹತ್ತಿ ಕಟ್ಟೆಯ ತುದಿಗೆ ನಿಂತು ಬಾಯಲ್ಲಿನ ಬೀಜಗಳನ್ನು ಉಗುಳಿ ಮಹಾವೀರಜಿಯ ಪಾದಗಳಿಗೆ ನಮಸ್ಕರಿಸಿ ಎಂದಿನಂತೆ ಅಂದರು, ನನ್ನ ಆಡುಗಳನ್ನು ಕಾಯಿರಿ. ತುಲಸೀದಾಸಜಿ ಅಥವಾ ಸೀತಾಜಿಯವರಿಗಿದ್ದಂತಹ ಅಂತರ್‌ದೃಷ್ಟಿ ಇರಲಿಲ್ಲ, ಇದ್ದಿದ್ದರೆ ನೋಡಬಹುದಿತ್ತು; ಮೂರ್ತಿ ಮುಗುಳ್ನಗೆ ಬೀರಿತು. ಅಷ್ಟೆಂದು ಅವಸರದಲ್ಲಿ ನಮಸ್ಕರಿಸಿ ಗುಡಿಯ ಕಟ್ಟೆಯಿಂದ ಕೆಳಗಿಳಿದರು. ಆಡುಗಳೊಂದಿಗೆ ಇಕ್ಕಟ್ಟಾದ ಓಣಿಯಲ್ಲಿ ಮುಂದೆ ಸಾಗಿ ತೋಟದ ಕಡೆ ನಡೆದರು. ಮಧ್ಯಾಹ್ನದ ಹೊತ್ತಾಗಿತ್ತು. ಮಳೆ ಬಿದ್ದಿದ್ದರಿಂದ ನೆಲವೆಲ್ಲ ಹಸಿಯಾಗಿತ್ತು. ಕೆರೆ-ಬಾವಿಗಳು, ಹಳ್ಳ-ಕೊಳ್ಳಗಳು ಸಾಕಷ್ಟು ತುಂಬಿದ್ದವು. ಜೋಳ, ಸಜ್ಜೆ, ಹತ್ತಿ, ಭತ್ತ, ಸಣಬು, ಸೌತೆ-ಹೀರೆ, ಗೋವಿನ ಜೋಳ, ಉದ್ದು ಇತ್ಯಾದಿಗಳನ್ನು ಬಿತ್ತುವ ಮೋಹವಿದ್ದ ರೈತರು ವೇಗವಾಗಿ ನೇಗಿಲು ಹೊಡೆಯತೊಡಗಿದ್ದರು. ಒಕ್ಕಲುತನದ ತಂತ್ರಗಳ ಅರಿವಿದ್ದ ಬಿಲ್ಲೇಸುರರು ಮೊದಲ ಮಳೆಯ ಮಣ್ಣಿನ ವಾಸನೆಯಿಂದ ಖುಶಿಗೊಳ್ಳುತ್ತ ಉತ್ತಮವಾದ ಒಕ್ಕಲುತನ ಮಾಡಬೇಕೆಂದು ಲೆಕ್ಕ ಹಾಕುತ್ತ ತನ್ನದೇ ಧ್ಯಾನದಲ್ಲಿ ಆಡುಗಳನ್ನು ಹೊಡೆದುಕೊಂಡು ಹೊರಟಿದ್ದರು. ತುಂಡು ಹೊಲಗಳಲ್ಲಿ ಒಂದನ್ನು ಗುತ್ತಿಗೆಗಾಗಿ ತೆಗೆದುಕೊಂಡಿದ್ದರು. ಮಳೆಗಾಲದ ಸಾಗುವಳಿಯಲ್ಲಿ ಹೆಚ್ಚಿನ ಶ್ರಮವಿರುವುದಿಲ್ಲ. ಒಂದು ಕೈ ಎರಡು ಕೈ ಅನ್ನುತ್ತ ಬೀಜಗಳನ್ನು ಬಿತ್ತಲಾಗುತ್ತದೆ. ಮಳೆ ನೀರಿನಿಂದ ಹೊಲ ಬೆಳೆದು ತುಂಬಿ ನಿಲ್ಲುತ್ತದೆ. ಎತ್ತುಗಳಿಲ್ಲ, ಕೇಳಿದರೆ ಯಾರೂ ಕೊಡುವುದಿಲ್ಲ. ಆರೇಳು ದಿನಗಳೊಳಗಾಗಿ ತಮಗೆ ಬೇಕಾದಷ್ಟು ಭೂಮಿಯನ್ನು ಗುದ್ದಲಿಯಿಂದ ಅಗೆದು ಸರಿಮಾಡಿಕೊಳ್ಳಬೇಕೆಂದು ಬಿಲ್ಲೇಸುರರು ನಿಶ್ಚಯಿಸಿದರು. ಊರಿನ ಜನ ಬೇರೆಲ್ಲ ಬೆಳೆಯುತ್ತಾರೆ, ಗೆಣಸು ಬೆಳೆಯುವುದಿಲ್ಲ. ಇದರಿಂದ ಬಹಳ ಲಾಭವಾಗುವುದು. ನಂತರ ಚಳಿಗಾಲದಲ್ಲಿ ಅದೇ ಹೊಲದಲ್ಲಿ ಬಟಾಣಿ ಬಿತ್ತಬಹುದು. ಗೆಣಸು ಬೆಳೆದು ನಿಂತಾಗ ರಾತ್ರಿ ಕಾಯಬೇಕಾಗುವುದು, ಆಗ ಯಾರಿಗಾದರೂ ಒಂದಿಷ್ಟು ಏನನ್ನಾದರೂ ಕೊಟ್ಟು, ರಾತ್ರಿ ಕಾವಲಿಗೆ ಇಡಬೇಕು. ಒಂದಿಷ್ಟು ಹಣ ಕೈಗೆ ಹತ್ತಬಹುದು.

ಹಾಗೆಂದು ನಿಶ್ಚಯಿಸಿ ಮತ್ತೆ ಈ ಲೋಕಕ್ಕೆ ಮರಳಿದ ಬಿಲ್ಲೇಸುರರು ಬಹಳ ದೂರ ಸಾಗಿ ಬಂದಿದ್ದರು. ಸ್ವಲ್ಪ ಗಾಬರಿಯಿಂದ ಆಡುಗಳನ್ನು ನಿರುಕಿಸಿದರು-ಗಂಗೆ, ಯಮುನೆ, ಸರಜೂ, ಪಾರ್ವತಿ ಇದ್ದಾರೆ; ಸೇಬಾಯಿನ, ಜಮಿಲಾ, ಗುಲಾಬಿ, ನಿತಬಿಯಾ ಇದ್ದಾರೆ; ರಮುವಾ, ಸ್ಯಮುವಾ, ಭಗವತಿಯಾ, ಪರಭುವಾ ಇದ್ದಾರೆ; ಟುರುಲಾ ಇದೆ, ಆದರೆ ದಿನವಾ? ಬಿಲ್ಲೇಸುರರು ದಿಗಿಲುಗೊಂಡು ನೋಡಿದರು, ಹಿಂದೆ ದೂರದವರೆಗೆ ಕಣ್ಣು ಹಾಯಿಸಿದರು. ದೀನಾನಾಥ ಎಲ್ಲವುಗಳಿಗಿಂತ ಗಟ್ಟಿಮುಟ್ಟಾಗಿತ್ತು. ಅದೇ ಹಿಂದೆ ಉಳಿಯಿತಲ್ಲ, ಅಥವಾ ಎಲ್ಲಿ ಹೋಯಿತು? ಕೂಗತೊಡಗಿದರು, "ಉರ್‍ರ್. ಉರ್‍ರ್! ದಿನವಾ ಬಾಲೇ-ಬಾಲೇ ಉರ್‍ರ್! ಬಾಬಾ, ದಿನ್‌ವಾ! ಉರ್‍ರ್, ಉರ್‍ರ್! ಬಾಬಾ, ದಿನವಾ! ಉರ್‍ರ್, ಉರ್‍ರ್, ಮಗೂ ದೀನಾನಾಥ, ಉರ್‍ರ್! ಟುರೂಮಿಾ ಬ್ಯಾಂ ಅನ್ನತೊಡಗಿತು. ದೀನಾನಾಥನ ಸದ್ದೇ ಇಲ್ಲ,

ಟುರುಮಿಾ, ದೀನಾನಾಥ ಎಲ್ಲಿದ್ದಾನೆ? ಟುರುಮಿಾ ಬ್ಯಾಂ-ಬ್ಯಾಂ ಅನ್ನುತ್ತ ಬಿಲ್ಲೇಸುರರ ಬಳಿ ಬಂದಿತು. ಆಡುಗಳನ್ನು ಹೊಡಕೊಂಡು ಬಿಲ್ಲೇಸುರರು ಅದೇ ದಾರಿಯಲ್ಲಿ ಹಿಂದಿರುಗಿದರು. ಅದೇ ಹಳ್ಳದ ಬಳಿ ಹುಡುಗರು ಗಳ ಹಿಡಿದುಕೊಂಡು ನಿಂತಿದ್ದರು. ಬಿಲ್ಲೇಸುರರನ್ನು ನೋಡಿ ಮುಗುಳ್ನಕ್ಕರು. ಬಿಲ್ಲೇಸುರರ ಹೃದಯ ಅಳುತ್ತಿತ್ತು. ಹುಡುಗರ ನಗುವಿನಿಂದ ಅವರ ತಲೆ ಬಿಸಿಯಾಯಿತು. ಆದರೆ ಜಾಣತನ ತೋರಿದರು. ಏನೂ ಅರಿಯದ ಭಾವದಿಂದ ಕೇಳಿದರು. "ಮಗೂ, ನಮ್ಮ ಆಡು ಈ ಕಡೆ ಬಂದಿತ್ತೇ?"

"ಯಾವ ಆಡು?"

"ಗಂಡು, ನಾವು ಅದನ್ನು ದಿನವಾ ಅನ್ನುತ್ತಿದ್ದೆವು."

"ದಿನವಾ ಅನ್ನುತ್ತಿದ್ದರೆ ದಿನವಾನನ್ನೇ ಕೇಳಿರಲ್ಲ. ಎಲ್ಲಿದೆಯೋ ನಮಗಂತೂ ಗೊತ್ತಿಲ್ಲ."

ಮತ್ತೆ ಬಿಲ್ಲೇಸುರರು ಏನೂ ಕೇಳಲಿಲ್ಲ. ಸಂಶಯ ಬಂದಿತು. ಹಳ್ಳದ ದಂಡೆ ಗುಂಟ ಹುಡುಕೋಣವೆನಿಸಿತು.

ಆದರೆ ಆಡುಗಳನ್ನು ಯಾರಿಗೊಪ್ಪಿಸಿ ಹೋಗುವುದು, ಮತ್ತೊಂದು ಮರಿಯನ್ನು ಮರೆಮಾಡಿದರೆ ಏನು ಮಾಡುವುದು? ಬೇಗಬೇಗನೆ ಮನೆಯ ಕಡೆ ನಡೆದರು. ಆಡುಗಳನ್ನೂ ಮರಿಗಳನ್ನೂ ಓಡಿಸುತ್ತಲೇ ನಡೆದರು. ದಾರಿಯಲ್ಲಿ ಸಿಕ್ಕ ಒಬ್ಬಿಬ್ಬರು ಕೇಳಿದರು, "ಏನಿದು, ಬಿಲ್ಲೇಸುರ, ಇಷ್ಟು ಬೇಗ, ಅದೂ ಓಡಿಸಿಕೊಂಡು ಹೊರಟಿದ್ದೀ?" ಬಿಲ್ಲೇಸುರರೆಂದರು, "ಅಣ್ಣಾ, ಒಂದು ಗಂಡು ಆಡನ್ನು ಯಾರೋ ಹಿಡಿದುಕೊಂಡಿದ್ದಾರೆ, ಅಲ್ಲಿ ಹಳ್ಳದ ಬದಿ ಹುಡುಗರು ಗಳ ಹಿಡಿದುಕೊಂಡು ನಿಂತಿದ್ದಾರೆ, ಹೇಳಲೊಲ್ಲರು." ಕೇಳಿದವರು ಅಂದರು, "ಊರಲ್ಲಿ ಎಂಥೆಂಥ ಕಳ್ಳರಿದ್ದಾರೆ ಗೊತ್ತಿಲ್ಲವೆ, ಅಂಗಳದಲ್ಲಿ ಚಿಕ್ಕ ಕಟ್ಟಿಗೆಯನ್ನಿಟ್ಟರೂ ಗೋಡೆಯಿಳಿದು ಬಂದು ಎತ್ತಿ ಒಯ್ಯುತ್ತಾರೆ. ಏನಾದರೂ ಅಂದರೆ ತೀರಿತು, ಜೋರು ಬಾಯಿಮಾಡಿ ಮರ್ಯಾದೆ ಕಳೆಯುತ್ತಾರೆ. ಊರು ಬಿಟ್ಟು ಹೋಗುವುದಾದರೂ ಎಲ್ಲಿಗೆ?" ಬಿಲ್ಲೇಸುರರು ಮುಂದೆ ನಡೆದರು. ಬಾಗಿಲು ತೆರೆದರು. ಕೊಠಡಿಯಲ್ಲಿ ಮರಿಗಳನ್ನೂ ಅಂಗಳದಲ್ಲಿ ಆಡುಗಳನ್ನೂ ಸೇರಿಸಿ ಬೀಗಹಾಕಿ, ಕೋಲು ತೆಗೆದುಕೊಂಡು ದೀನಾನಾಥನನ್ನು ಹುಡುಕಲು ಹೊರಟರು.

ಮೊದಲು ದೀನಾನಾಥನ ಮನೆಗೆ ಹೋದರು. ಆತ ಮನೆಯಲ್ಲಿಲ್ಲವೆಂದು ತಿಳಿಯಿತು. ಅಲ್ಲಿಂದ ಸೀದಾ ಹಳ್ಳದ ಕಡೆ ನಡೆದರು. ಎತ್ತರದ ದಿನ್ನೆಯೊಂದರ ಮೇಲೆ ಕೂತ ಒಬ್ಬ ಹುಡುಗ ಆ ಕಡೆ ಈ ಕಡೆ ನೋಡುತ್ತಿದ್ದ. ಬಿಲ್ಲೇಸುರರಿಗೆ ಗೊತ್ತಾಯಿತು. ಹಳ್ಳದ ದಂಡೆಗುಂಟ ಮುಂದೆ ಹೋದರು. ಹುಡುಗ ಒಂದು ವಿಶಿಷ್ಟ ಕೂಗು ಹಾಕಿದ. ಹತ್ತಿರದಲ್ಲೇ ಇರಬೇಕೆಂದು ಬಿಲ್ಲೇಸುರರು ತಿಳಿದುಕೊಂಡರು. ಮುಂದೆ ಮುಂದೆ ಹಾಗೆಯೇ ನಡೆದರು. ದೂರದಲ್ಲೊಂದು ಗಿಡಗಳ ಗುಂಪು ಕಾಣಿಸಿತು, ಅಲ್ಲೇ ಎಲ್ಲೋ ಬಿದ್ದುಕೊಂಡಿರಬೇಕೆಂದು ಖಾತ್ರಿಯಾಯಿತು. ಗಿಡಗಳ ಬಳಿ ಹೋದರು. ಅಲ್ಲಿ ಯಾರೂ ಇರಲಿಲ್ಲ. ಒಳಗೆ ಹೋದರು. ಸರಿಯಾಗಿ ನೋಡಿದರು, ರಕ್ತಮಯವಾಗಿದ್ದ ನೆಲ ಕಾಣಿಸಿತು. ಮನುಷ್ಯರೂ ಕಾಣಲಿಲ್ಲ. ಅವರ ಮುಖ ಚಿಕ್ಕದಾಯಿತು. ಮನಸ್ಸು ಅಳತೊಡಗಿತು, ಆದರೆ ಕಣ್ಣಲ್ಲಿ ನೀರು ಬರಲಿಲ್ಲ. ಎಲ್ಲಿಯೂ ನ್ಯಾಯವಿಲ್ಲ, ಜನ ಬರೇ ಉಪದೇಶ ಕೊಡುತ್ತಾರೆ. ಅಲ್ಲಿಂದ ಹೊರಟು ಬಾವಿಯ ಬಳಿ

ಬಂದರು. ಬಹಳ ಉದ್ವೇಗಗೊಂಡಿದ್ದರು. ಕಟ್ಟೆಯ ಮೇಲೆ ಕೂತರು. ಆಡನ್ನು ಕೊಂದು ಹಾಕಲಾಗಿತ್ತು. ಹುಡುಗರಿಗೆ ಗೊತ್ತಿದೆ, ಹೇಳುತ್ತಿಲ್ಲವಷ್ಟೆ. ಎಂಟು ರೂಪಾಯಿ ಬೆಲೆಯದಿತ್ತು. ಮನಸ್ಸು ಅಳುತ್ತಿತ್ತು. ಯಾರೂ ಸಹಾಯ ಮಾಡುವವರಿಲ್ಲ. ಮುಳುಗುತ್ತಿರುವ ಸೂರ್ಯನ ಬಿಸಿಲು ತಲೆಯನ್ನು ಸುಡುತ್ತಿತ್ತು, ಆದರೆ ತಮ್ಮದೇ ಚಿಂತೆಯಲ್ಲಿ ಮುಳುಗಿದ ಬಿಲ್ಲೇಸುರರಿಗೆ ಬಿಸಿಲು ತಗಲಿಯೂ ತಗಲುತ್ತಿರಲಿಲ್ಲ.

ಈಗ ಆಡುಗಳಿಗೆ ಹಸಿವಾಗಿದೆ. ಸಂಜೆಯಾಗುತ್ತ ಬಂದಿದೆ, ಮೇಯಿಸಲು ಸಮಯವಿಲ್ಲ. ಕುಡುಗೋಲು ತಂದಿಲ್ಲ, ಹಾಗಾಗಿ ಎಲೆಗಳನ್ನು ಕೊಯ್ಯಲಾಗಿಲ್ಲ, ರಾತ್ರಿಯೂ ಹಸಿದುಕೊಂಡೇ ಇರಬೇಕಾಗುವುದು. ಹೀಗೆ ಮಾಡಿದರೆ ಹೇಗೆ ನಡೆದೀತು? ಅವು ತಿನ್ನದಿದ್ದರೆ ಮುಂಜಾನೆ ಹಾಲು ಕೊಡಲಾರವು. ಮರಿಗಳೂ ಹಸಿದಿರಬೇಕಾಗುತ್ತದೆ. ಅವು ಬಡವಾಗಿಬಿಡುತ್ತವೆ. ರೋಗವೂ ಬರಬಹುದು. ಒಂದಿಷ್ಟು ಹೊಟ್ಟು ಇದೆ, ಆದರೆ ಅಷ್ಟರಿಂದ ಇಷ್ಟೆಲ್ಲ ಆಡುಗಳಿಗೆ ಮರಿಗಳಿಗೆ ಏನಾದೀತು? ರಾತ್ರಿ ಗಿಡಗಳಿಂದ ಎಲೆಗಳನ್ನು ಕೀಳಬೇಕಾಗುವುದು.

ಸೂರ್ಯ ಮುಳುಗಿದ. ಬಿಲ್ಲೇಸುರರ ಕಣ್ಣುಗಳಲ್ಲಿ ಸಂಜೆಯ ಉದಾಸೀನತೆ ಪಸರಿಸಿತು. ದಿಕ್ಕುಗಳೂ ಗಾಳಿಯೊಂದಿಗೆ ನಿಟ್ಟುಸಿರಿಡತೊಡಗಿದವು. ತೊರೆಯಲ್ಲಿ ನೀರು ಹರಿಯುತ್ತಲೇ ಇತ್ತು, ಸಾವಿನ ಸಂದೇಶ ಸಾರುತ್ತಿರುವುದೇನೋ ಎಂಬಂತೆ. ಜನರು ಹೊಲವನ್ನು ಉತ್ತಿ-ಬಿತ್ತಿ ಮನೆಗಳಿಗೆ ಮರಳತೊಡಗಿದ್ದರು, ಮನೆಯ ದವಡೆಗಳಲ್ಲಿ ಸಿಕ್ಕಿಕೊಂಡು ಅಪ್ಪಚ್ಚಿಯಾಗಿ ಸಾಯುವುದಕ್ಕಾಗಿಯೇ ಏನೋ ಎಂಬಂತೆ ಗುಬ್ಬಿಗಳು ತಮ್ಮ ತಮ್ಮ ಗೂಡುಗಳಿರುವ ಟೊಂಗೆಗಳ ಮೇಲೆ ಕೂತು ಚಿಂವ್-ಚಿಂವ್ ಅನ್ನತೊಡಗಿದ್ದವು, ಅತ್ತು-ಅತ್ತು ಸಾರಿ ಹೇಳುತ್ತಿದ್ದವು, ರಾತ್ರಿಯಲ್ಲಿ ಗೂಡಿಗೆ ದಾಳಿಯಿಕ್ಕುವ ಕಾಡುಬೆಕ್ಕಿನಿಂದ ನಮ್ಮನ್ನು ಯಾರು ರಕ್ಷಿಸುವರು? ಗಾಳಿ ಬೀಸುತ್ತಿರುವಂತೆಯೇ ಸೂಚಿಸುತ್ತಿತ್ತು, ಎಲ್ಲವೂ ಹೀಗೆಯೇ ಕೊಚ್ಚಿಕೊಂಡು ಹೋಗಿಬಿಡುತ್ತದೆ ಎಂದು.

ಬಿಲ್ಲೇಸುರರು ಕೋಲು ಹಿಡಿದುಕೊಂಡು ನಿಧಾನವಾಗಿ ಊರಕಡೆ ತಿರುಗಿ ನಡೆದರು. ತಾನಾಗಿಯೇ ಮನಸ್ಸು ಗಟ್ಟಿಯಾಗತೊಡಗಿತ್ತು. ಬೇರೆ ಕೆಲಸ ಮಾಡಲು ಮನಸ್ಸಿನಲ್ಲಿ ಶಕ್ತಿ ಹುಟ್ಟತೊಡಗಿತ್ತು. ಭರವಸೆಯೂ ಮೂಡತೊಡಗಿತು. ಊರ ಅಂಚಿಗೆ ಬಂದರು. ಮಹಾವೀರಜಿಯ ದೇವಸ್ಥಾನ ಕಾಣಿಸಿತು. ಕತ್ತಲಾಗಿತ್ತು. ಎದುರಿನಿಂದ ದೇವಸ್ಥಾನ ಕಟ್ಟೆಯೇರಿದರು. ಕಟ್ಟೆಯ ಮೇಲಿಂದಲೇ ದೇವಸ್ಥಾನಕ್ಕೆ ತಿರುವುಮುರುವಾಗಿ ಪ್ರದಕ್ಷಿಣೆ ಹಾಕಿ, ಮಹಾವೀರಜಿಯ ಬಳಿ ಬಂದರು. ನಿರ್ಲಕ್ಷದಿಂದ ಎದುರಿಗೆ ನಿಂತು ಆವೇಶದಿಂದ ಮಾತಾಡತೊಡಗಿದರು, "ನೋಡು, ನಾನು ಬಡವ. ನೀನು ಬಡವರ ಆಧಾರವೆಂದು ಎಲ್ಲರೂ ಹೇಳುತ್ತಾರೆ, ಅದಕ್ಕಾಗಿಯೇ ನಾನು ನಿನ್ನ ಬಳಿ ಬರುತ್ತಿದ್ದೆ, ನನ್ನ ಆಡುಗಳನ್ನು ಮರಿಗಳನ್ನು ಕಾಪಾಡು ಅಂತ ಕೇಳಿಕೊಳ್ಳುತ್ತಿದ್ದೆ. ನೀನು ಯಾವ ರೀತಿ ಕಾಪಾಡಿದೆ ಅಂತ ಹೇಳು, ಹೀಗೆ ಉದ್ದ ಮೋರೆ ಮಾಡಿಕೊಂಡು ನಿಂತಿದ್ದೀಯಲ್ಲ?" ಯಾವ ಉತ್ತರವೂ ಸಿಗಲಿಲ್ಲ. ಬಿಲ್ಲೇಸುರರು ಕಣ್ಣಲ್ಲಿ ಕಣ್ಣು ನೆಟ್ಟು ಮಹಾವೀರಜಿಯ ಮುಖಕ್ಕೆ ಜೋರಾಗಿ ಕೋಲಿನಿಂದ ಬೀಸಿ ಹೊಡೆದರು, ಮಣ್ಣಿನ ಆ ಮುಖ ಚಿಣ್ಣಿ ಕೋಲಿನಂತೆ ತುಂಡರಿಸಿ ಮಾರು ದೂರ ಹೋಗಿ ಬಿದ್ದಿತು.

## ಹತ್ತು

ಬಿಲ್ಲೇಸುರರು, ಈಗಾಗಲೇ ಹೇಳಿದಂತೆ, ಪದೇ ಪದೇ ದುಃಖವನ್ನು ಎದುರಿಸಿ ಅದಕ್ಕೆ ಸವಾಲೊಡ್ಡುತ್ತಲೇ ನಡೆದಿದ್ದರು. ಅವರೆಂದೂ ಸೋಲೊಪ್ಪಲಿಲ್ಲ. ಈಚೆಗೆ ನಗರಗಳಲ್ಲಿ ಮಹಾತ್ಮಾ ಗಾಂಧಿಯವರನ್ನನುಸರಿಸಿ ಎಲ್ಲರೂ ಆಡಿನ ಹಾಲು ಕುಡಿಯ ತೊಡಗಿದ್ದರಿಂದ ಆಡಿನ ಹಾಲಿಗೆ ಒಳ್ಳೆಯ ಬೇಡಿಕೆಯಿದೆ; ಆದ್ದರಿಂದ ಆಕಳ ಹಾಲಿಗಿಂತ ಅದರ ಬೆಲೆ ಹೆಚ್ಚಾಗಿದೆ; ಹೀಗಾಗಿ ಹಳ್ಳಿಗಳಲ್ಲೂ ಈ ಪದ್ಧತಿ ಪ್ರಚಲಿತವಾಗಿದೆ; ಆದರೆ ಬಿಲ್ಲೇಸುರರ ಕಾಲದಲ್ಲಿ ಇಡೀ ಪ್ರಪಂಚಕ್ಕೇ ಆಡಿನ ಹಾಲಿನ ಬಗ್ಗೆ ತಿರಸ್ಕಾರವಿತ್ತು; ತೀರ ಅಸ್ವಸ್ಥರಾದವರಿಗೆ, ಆಕಳ ಹಾಲೂ ಸಹ ಪಚನವಾಗದಂತಹ ಪರಿಸ್ಥಿತಿಯಲ್ಲಿ ಮಾತ್ರ, ಆಡಿನ ಹಾಲನ್ನು ಕೊಡಲಾಗುತ್ತಿತ್ತು. ಬಿಲ್ಲೇಸುರರ ಊರಿನಲ್ಲಿ ಈ ತರಹದ ಒಬ್ಬ ರೋಗಿಯೂ ಇರಲಿಲ್ಲ. ಹಾಲನ್ನು ಮಾರಬೇಕೆಂದರೂ ಮಾರಾಟವಾಗದಿದ್ದಾಗ, ಯಾರಿಗಾದರೂ ಅವರನ್ನು ಸಂತುಷ್ಟಗೊಳಿಸಲು ಹಾಗೆಯೇ ಹಾಲು ಕೊಟ್ಟರೂ ಅವರು ಮುಖ ಕಿವುಚತೊಡಗಿದಾಗ, ಬಿಲ್ಲೇಸುರರು ಖೋವಾ ತಯಾರಿಸತೊಡಗಿದರು. ಆಡಿನ ಹಾಲಿನ ಖೋವಾ ತಯಾರಿಸುವಲ್ಲಿ ಮೊದಲಿಗೆ ಪ್ರಕೃತಿಯೇ ಅಡ್ಡವಾಯಿತು; ಆಡಿನ ಹಾಲಲ್ಲಿ ನೀರಿನ ಅಂಶ ಹೆಚ್ಚಾಗಿರುತ್ತದೆ; ದೊಡ್ಡ ಕಟ್ಟಿಗೆಗಳನ್ನು ಉರಿಸಬೇಕಾಯಿತು; ಬಹಳ ಹೊತ್ತಿನವರೆಗೆ ಒಲೆಯ ಮುಂದೆ ಕೂತಿರಬೇಕಾಯಿತು; ಬಹಳ ಪರಿಶ್ರಮ; ಗುಡ್ಡ ಅಗೆದು ಇಲಿ ಹಿಡಿದ ಹಾಗೆ-ಖೋವಾದ ಒಂದು ಚಿಕ್ಕ ಮುದ್ದೆ ಸಿದ್ಧವಾದಾಗ ಮನಸ್ಸೂ ಚಿಕ್ಕದಾಯಿತು. ಒಂದು ಸೇರು ಎಮ್ಮೆ ಹಾಲಿನಲ್ಲಿ ಪಾವು ಖೋವಾ ಹೊರಡುತ್ತದೆ, ಇದು ಅದರ ಅರ್ಧದಷ್ಟೂ ಆಗಲಿಲ್ಲ. ಗಟ್ಟಿಮನಸ್ಸು ಮಾಡಿ ಮಾರಲು ಹೊರಟರು; ಭಜನಾ ಹಲವಾಯಿ ಜೋತಸುರವಾಲೇನ ಬಳಿ ಹೋದರು. ಅವನು ಬೀಜಗಳನ್ನು ಕಡಿಯುತ್ತಿದ್ದ, ಅವಸರದಲ್ಲಿ ಅವನು ನೋಡಲಿಲ್ಲ, ಹಾಗೆಯೇ ತೂಕ ಮಾಡಿ ಹಣ ಕೊಟ್ಟ; ಎರಡನೇ ದಿನ ಹೋದಾಗ ತೂಕ ಮಾಡಿ ಇಟ್ಟುಕೊಂಡ. ಬಿಲ್ಲೇಸುರರು ಕೇಳಿದರು, "ಹಣ?" ಅವನೆಂದ, "ಹಣ ನಿನ್ನೆಯೇ ಕೊಟ್ಟಿದ್ದೇನೆ, ನಾನು ಎಮ್ಮೆಯ ಹಾಲಿನ ಖೋವಾ ಅಂತ ತಿಳಿದಿದ್ದೆ, ಇದು ಆಡಿನ ಖೋವಾ, ಆಡಿನ ಖೋವಾಕ್ಕೆ ಅರ್ಧ ಬೆಲೆಯೂ ಹೆಚ್ಚಾಯಿತು, ಆಡಿನ ಖೋವಾ ನಾನು ಕೊಳ್ಳುವುದಿಲ್ಲ; ಇನ್ನು ಮೇಲೆ ತರಬೇಡ, ಮಿಠಾಯಿಯೆಲ್ಲ ಹಾಳಾಗಿ ಬಿಡುತ್ತದೆ, ಗಿರಾಕಿಗಳು ಬೈಯ್ಯುತ್ತಾರೆ, ಇದರಲ್ಲಿ ತುಪ್ಪವಿಲ್ಲ, ರುಚಿಯೂ ಇಲ್ಲ; ಒಂದಿಷ್ಟು ತುಪ್ಪ ಇದರಿಂದ ಹೊರಟರೂ ಅದು ಬೇರೆ ತುಪ್ಪದೊಂದಿಗೆ ಕೂಡಿಕೊಳ್ಳುವುದಿಲ್ಲ-ಒಟ್ಟು ಎಲ್ಲ ತುಪ್ಪಕ್ಕೆ ಕೆಟ್ಟ ವಾಸನೆ ಬರುತ್ತದೆ." ಬಿಲ್ಲೇಸುರರು ತಲೆ ತಗ್ಗಿಸಿ ಸುಮ್ಮನೆ ಹೊರಟು ಬಂದರು. ಮಾಲು ಇದೆ, ಆದರೆ ಮಾರಾಟವಾಗುತ್ತಿಲ್ಲ. ಆಗ ಒಂದು ಉಪಾಯ ಹೊಳೆಯಿತು. ಇದರಲ್ಲಿ ಖೋವಾ ಮಾಡುವಷ್ಟು ಪರಿಶ್ರಮವೂ ಇಲ್ಲ. ಕೆಂಡದ ಉರಿಯ ಮೇಲೆ ಬೋಗುಣಿಯಲ್ಲಿ ಹಾಲು ಇಡುತ್ತಿದ್ದರು, ಇತ್ತ ತಮ್ಮ ಕೆಲಸಗಳನ್ನು ಮಾಡುತ್ತಿದ್ದರು, ಹಾಲು ಕಾಯ್ದೊಡನೆ ಅದನ್ನು ತಂಪುಗೊಳಿಸಿ ಹೆಪ್ಪು ಹಾಕಿಡುತ್ತಿದ್ದರು; ಮರುದಿನ ಕಡೆದು ಬೆಣ್ಣೆ ತೆಗೆಯುತ್ತಿದ್ದರು. ಮಜ್ಜಿಗೆಯನ್ನು ತಾವೂ ಕುಡಿಯುತ್ತಿದ್ದರು, ಮರಿಗಳಿಗೂ ಕುಡಿಸುತ್ತಿದ್ದರು.

ಬೆಣ್ಣೆಯಿಂದ ತುಪ್ಪ ಮಾಡಿ ಅದರಲ್ಲಿ ನಾಲ್ಕರಲ್ಲೊಂದು ಭಾಗದಷ್ಟು ಎಮ್ಮೆಯ ಬೆಣ್ಣೆ ಕೊಂಡು ಬೆರೆಸುತ್ತಿದ್ದರು, ಕಡಿಮೆ ಬೆಲೆಗೆ ಪೇಟೆಯಲ್ಲಿ ಮಾರಾಟ ಮಾಡಿ ಬರುತ್ತಿದ್ದರು. ಹಳ್ಳಿಗಳಲ್ಲಿ ಆಕಳು, ಎಮ್ಮೆ, ಆಡುಗಳ ಮಿಶ್ರಣ ಮಾಡಿದ ಬೆಣ್ಣೆಯೂ ಮಾರಾಟವಾಗುತ್ತದೆ. ಎರಡು ಅಥವಾ ಮೂರೂ ಬಗೆಯ ಪ್ರಾಣಿಗಳನ್ನು ಸಾಕಿಕೊಂಡವರು ಹಾಲನ್ನು ಪ್ರತ್ಯೇಕವಾಗಿ ಹೆಪ್ಪು ಹಾಕುವುದಿಲ್ಲ. ಬಿಲ್ಲೇಸುರರ ಕೆಲಸ ಹೀಗೆಯೇ ಸಾಗಿತು. ಆಡು ಸತ್ತುಹೋದ ನಂತರದ ದಿನಗಳಲ್ಲಿ ಅವರು ಹಾನಿ-ಲಾಭ ಮತ್ತು ಜೀವನ-ಮರಣಗಳ ಬಗ್ಗೆ ತತ್ವಜ್ಞಾನಿಯಂತೆ ಯೋಚಿಸುತ್ತ ತಮ್ಮ ಭವಿಷ್ಯದ ಬಗೆಗೂ ವಿಚಾರ ಮಾಡಿದರು. ಆಡುಗಳನ್ನು ಇನ್ನು ಬಯಲಿಗೆ ಮೇಯಲು ಕರೆದೊಯ್ಯಬಾರದು, ಮನೆಯಲ್ಲೇ ತಿನ್ನಿಸಬೇಕು, ಹೊಲ ತಯಾರಾಗುವ ವರೆಗೆ ಹಾಗೂ ಗೆಣಸಿನ ಬೆಳೆ ಬರುವವರೆಗೆ ಹೀಗೆಯೇ ಮಾಡಬೇಕು ಎಂದು ಅವರು ನಿರ್ಧರಿಸಿದರು. ಬೆಳಗಾಗುತ್ತಲೇ ಬಿಲ್ಲೇಸುರರು ಗುದ್ದಲಿ ತೆಗೆದುಕೊಂಡು ಹೊಲದ ಕೆಲಸಕ್ಕೆ ಹೊರಟರು. ರಾತ್ರಿ ಸಾಕಷ್ಟು ಎಲೆಗಳನ್ನು ತಂದಿದ್ದರಿಂದ ಇಡೀ ದಿನ ಆಡುಗಳನ್ನು ಸಾಕಷ್ಟು ಮೇಯಿಸಿದ್ದರು. ಆಡುಗಳು ಹಾಗೂ ಮರಿಗಳು ಎಂದಿನಂತೆ ಕೊಟ್ಟಿಗೆಯಲ್ಲಿ ಭದ್ರವಾಗಿದ್ದವು. ಹೊಲದಲ್ಲಿ ನೆಲ ಅಗೆಯುವುದನ್ನು ಕಂಡು ಜನ ತಮಾಷೆ ಮಾಡತೊಡಗಿದರು. ಆದರೆ ಬಿಲ್ಲೇಸುರರು ಪಿಟ್ಟೆನ್ನದೆ ತಮ್ಮ ಕೆಲಸದಲ್ಲಿ ಮಗ್ನರಾಗಿದ್ದರು. ಮಧ್ಯಾಹ್ನದ ಹೊತ್ತಿಗೆ ಸಾಕಷ್ಟು ಜಮೀನು ಅಗೆದು ಹದಮಾಡಿದ್ದರು. ನೋಡಿ ಎದೆ ತಂಪಾಯಿತು. ಆರೇಳು ದಿನಗಳಲ್ಲಿ ತಮ್ಮ ಪರಿಶ್ರಮದಿಂದ ಆಡುಗಳಿಗಾಗಿ ದೊಡ್ಡಿಯನ್ನು ತಯಾರಿಸಬಹುದೆಂದು ಮನಸ್ಸಿಗೆ ಭರವಸೆಯೆನಿಸಿತು. ಮಧ್ಯಾಹ್ನ ಮನೆಗೆ ಬಂದರು, ಸ್ನಾನ ಮಾಡಿ ಸಜ್ಜಿಗೆ ತಯಾರಿಸಿದರು, ತಿಂದು ತುಸು ಹೊತ್ತು ವಿಶ್ರಾಂತಿ ಪಡೆದರು. ಮಧ್ಯಾಹ್ನ ಕಳೆಯಿತು, ಇನ್ನೂ ಸಂಜೆಯಾಗಿರಲಿಲ್ಲ. ಎದ್ದು ಮತ್ತೆ ಹೊಲದಲ್ಲಿ ನೆಲ ಅಗೆಯಲು ನಡೆದರು. ಸಂಜೆ ತನಕ ದುಡಿದು ಆಡುಗಳಿಗೆ ಎಲೆಗಳನ್ನು ಕೊಯ್ದುಕೊಂಡು ರಾತ್ರಿಯಾಗುವಾಗ ಮನೆಗೆ ಬಂದರು. ಏಳು ದಿನಗಳ ಬದಲಿಗೆ ಐದೇ ದಿನಗಳಲ್ಲಿ ಬಿಲ್ಲೇಸುರರು ಹೊಲದ ಒಂದು ಭಾಗವನ್ನು ಅಗೆದು ಹದಗೊಳಿಸಿದರು. ಹೊಲದಿಂದ ಒಂದು ಭಾಗವನ್ನು ಬೇರ್ಪಡಿಸಿದರು. ಏನನ್ನು ಬಿತ್ತಬೇಕೆನ್ನುತ್ತೀ ಬಿಲ್ಲೇಸುರ?-ಎಂದು ಜನ ಕೇಳುತ್ತಿದ್ದರು. ಬಿಲ್ಲೇಸುರರು ಹೇಳುತ್ತಿದ್ದರು, ಅಫೀಮು! ಹಳ್ಳಿಗಳಲ್ಲಿ ಯಾರೂ ಯಾರಿಗೂ ಅಷ್ಟಾಗಿ ಗಮನ ಕೊಡುವುದಿಲ್ಲ, ಹಾಗೆ ಎಲ್ಲಿಯೂ ಕೊಡುವುದಿಲ್ಲ, ಆ ಮಾತು ಬೇರೆ. ಬಿಲ್ಲೇಸುರರು ಅತ್ತಿತ್ತ ತಿರುಗಿ ವಿಚಾರಿಸಿ ಗೆಣಸಿನ ಅಗೆಗಳನ್ನು ತಂದರು. ಒಂದು ದಿನ ಜನರೆಲ್ಲ ನೋಡಿದರು-ಬಿಲ್ಲೇಸುರರು ಗೆಣಸು ನೆಡುತ್ತಿದ್ದಾರೆ. ಮಳೆ ಬರುವುದಕ್ಕೂ ಗೆಣಸು ನೆಡುವುದಕ್ಕೂ ಸರಿ ಹೋಯಿತು. ಆಗ ಬಿಲ್ಲೇಸುರರು ಆಲೂಗಡ್ಡೆಯನ್ನು ಬೆಳೆಯಲು ಮಣ್ಣು ಹದಗೊಳಿಸತೊಡಗಿದರು.

## ಹನ್ನೊಂದು

ತ್ರಿಲೋಚನನ ಎತ್ತುಗಳನ್ನು ಕೊಳ್ಳದೆ ಬಿಲ್ಲೇಸುರರು ಬೇರೆಡೆಯಿಂದ ಆಡುಗಳನ್ನು

ಕೊಂಡಂದಿನಿಂದಲೇ ತ್ರಿಲೋಚನರು ಈ ಪಾಪದ ಮನುಷ್ಯನನ್ನು ಪೇಚಿಗೆ ಸಿಕ್ಕಿಸಲು ಹೊಂಚುಹಾಕತೊಡಗಿದ್ದರು. ಆಡುಗಳ ಮರಿಗಳು ಹೆಚ್ಚಾದಂತೆ ಊರಲ್ಲಿ ಬಿಲ್ಲೇಸುರರ ಹೆಸರು ಹಣವಂತರ ಪಟ್ಟಿಯಲ್ಲಿ ಸೇರತೊಡಗಿತು. ಜನರು ಬಗೆಬಗೆಯ ಅಭಿಪ್ರಾಯಗಳನ್ನು ಹೇಳತೊಡಗಿದರು. ಆಶ್ವಯುಜ ತಿಂಗಳು. ಬಿಲ್ಲೇಸುರರ ಗೆಣಸಿನ ಬಳ್ಳಿಗಳು ನಳನಳಿಸತೊಡಗಿದ್ದವು. ಇಂತಿಷ್ಟು ಮಣ ಗೆಣಸು ಹೊರಡಬಹುದೆಂದು ಜನ ಅಂದಾಜುಕಟ್ಟತೊಡಗಿದ್ದರು; ಬಿಲ್ಲೇಸುರರು ಚಪ್ಪರದ ಕೆಳಗೆ ಆಡಿನ ಹಾಲಿನೊಂದಿಗೆ ಹುರಿಹಿಟ್ಟು ಬೆಲ್ಲ ತಿನ್ನತೊಡಗಿದ್ದರು, ಆಗ ತ್ರಿಲೋಚನರು ಬಂದರು. ಆಡುಗಳ ಮರಿಗಳನ್ನು ಹೊದಿಸಿ ಮರೆಮಾಡಲೆಂದು ಒಂದು ಬುಟ್ಟಿಯನ್ನು ಡಬ್ಬು ಹಾಕಿತ್ತು, ಅದರ ಮೇಲೆ ಕೂಡಲೆಂದು ತಿರುಗಿದ್ದರು, ಆದರೆ ಬಿಲ್ಲೇಸುರರು ಕೈಯಲ್ಲಾಡಿಸಿದ್ದನ್ನು ನೋಡಿ ನೆಲದ ಮೇಲೆಯೇ ಕೂತರು. "ಒಂದು ಭಾರೀ ಸುದ್ದಿಯಿದೆ ಬಿಲ್ಲೇಸುರ" -ಎಂದು ಮುಗುಳ್ನಗುತ್ತ ಹೇಳಿದರು. ಉಪದೇಶಕನ ಭಂಗಿಯಲ್ಲಿ ಕೈಯೆತ್ತಿ ಏನೂ ಮಾತಾಡದೆ ಆಶ್ವಾಸನೆ ಕೊಡುತ್ತಿರುವ ಹಾಗೆ, ತುಸು ಹೊತ್ತು ತಾಳಿರಿ ಅಂತ ಬಿಲ್ಲೇಸುರರು ಸನ್ನೆ ಮಾಡಿದರು. ತ್ರಿಲೋಚನರು ಕೇಳಿದರು, ಊಟ ಮಾಡುವಾಗ ಮಾತಾಡುವುದಿಲ್ಲವೆ? ಗಂಭೀರ ಭಾವದಿಂದ ಕಣ್ಣು ಮುಚ್ಚಿ ತಲೆಯಲುಗಿಸಿ ಬಿಲ್ಲೇಸುರರು ಉತ್ತರಿಸಿದರು. ತ್ರಿಲೋಚನರು ತಮ್ಮ ಮಾತುಕತೆಯ ರೂಪರೇಷೆಗಳನ್ನು ಮನದಲ್ಲೇ ಮೆಲುಕುಹಾಕತೊಡಗಿದರು.

ಬೇಗ ಬೇಗನೆ ಉಂಡು ಬಿಲ್ಲೇಸುರರು ಎದ್ದರು. ಕಾಲುವೆಯ ಬಳಿ ಕೂತು ಕೈತೊಳೆದರು, ಬಾಯಿ ಮುಕ್ಕಳಿಸಿದರು, ನಿತ್ಯದ ರೂಢಿಯಂತೆ ಜನಿವಾರದಲ್ಲಿ ಕಟ್ಟಿಕೊಂಡಿದ್ದ ತಾಮ್ರದ ದಂತಕಡ್ಡಿಯಿಂದ ಹಲ್ಲು ಸ್ವಚ್ಛ ಮಾಡಿಕೊಂಡರು. ಮತ್ತೆ ಬಾಯಿ ಮುಕ್ಕಳಿಸಿದರು, ಬಳಿಕ ಡರ್ರನೆ ತೇಗಿ, ತಲೆ ತಗ್ಗಿಸಿ ಕೊಟ್ಟಿಗೆಯ ಒಳಗೆ ಹೋದರು. ತ್ರಿಲೋಚನರು ನೋಡುತ್ತಲೇ ಇದ್ದರು. ಬಿಲ್ಲೇಸುರರು ಒಂದು ಹೊರಸನ್ನು ಹೊರಗೆ ತಂದರು. ಅದನ್ನು ಹಾಕಿ ಹೇಳಿದರು, "ಬಾ, ಜೋಕೆಯಿಂದ ಕೂತುಕೋ, ಹೆಚ್ಚಿಗೆ ಅಲ್ಲಾಡಬೇಡ." ತ್ರಿಲೋಚನರು ಎದ್ದು ಬಂದು ಹೊರಸಿನ ಮೇಲೆ ಕೂತರು. ಒಂದು ಕಡೆ ಬಿಲ್ಲೇಸುರರು ಕೂತರು.

ತ್ರಿಲೋಚನರು ಬಿಲ್ಲೇಸುರರನ್ನು ನೋಡಿದರು, ಬಳಿಕ ಆಶ್ಚರ್ಯದಿಂದ ಕಣ್ಣರಳಿಸಿ ಹೇಳಿದರು, "ನಿನಗೆ ಮನಸ್ಸಿದ್ದರೆ ನೋಡಿ, ಒಂದು ಒಳ್ಳೇ ಮದುವೆಯ ಹೆಣ್ಣಿದೆ."

ಮದುವೆಯ ಹೆಸರು ಕೇಳುತ್ತಲೇ ಬಿಲ್ಲೇಸುರರ ನರನಾಡಿಗಳಲ್ಲಿ ವಿದ್ಯುತ್ ಪ್ರವಾಹ ಹರಿದಂತಾಯಿತು; ಆದರೆ ಹಿಂದೂಧರ್ಮದ ರೀತಿಯಂತೆ ಅದನ್ನು ಪ್ರಯೋಜನವಾದವಾಗಿ ಬಳಸಿಕೊಳ್ಳುತ್ತ ಅವರೆಂದರು, "ಈಗ ನೀನೇ ನೋಡುತ್ತಿರುವೆಯಲ್ಲ, ಹುರಿದ ಅಕ್ಕಿಹಿಟ್ಟು ತಿನ್ನಬೇಕಾಗಿ ಬಂದಿದೆ. ಒಬ್ಬ ಹೆಂಗಸು ಇದ್ದರೆ ಸಾಯುವ ಪರಿಸ್ಥಿತಿಯಲ್ಲೂ ರೊಟ್ಟಿ ಸುಟ್ಟು ಇಟ್ಟಿರುತ್ತಿದ್ದಳು."

"ನೀನನ್ನುವುದು ಸರಿ," ಗಂಭೀರವಾಗಿ ತ್ರಿಲೋಚನರು ಅಂದರು.

ಬಿಲ್ಲೇಸುರರಿಗೆ ಪ್ರಚೋದನೆ ಸಿಕ್ಕಂತಾಗಿ ಹೇಳಿದರು, "ಊರಿನಲ್ಲಿಯ ನಾಲ್ಕಾರು ಜನರನ್ನು ಅಣ್ಣತಮ್ಮಂದಿರ ಹಾಗೆ ಹಚ್ಚಿಕೊಂಡಿದ್ದೇನೆ, ಹಾಗೆಂದು ಇಲ್ಲೇ ಬಿದ್ದುಕೊಂಡಿದ್ದೇನೆ, ಇಲ್ಲದಿದ್ದರೆ ಹಾಗೆ ಸಾಯಲು ಇಡೀ ಜಗತ್ತಿನ ತುಂಬ ಸಾಕಷ್ಟು ಜಾಗಗಳಿವೆಯಲ್ಲ."

"ಇದನ್ನೂ ನೀನು ಹೇಳಿಯೇ ನಾನು ತಿಳಿಯಬೇಕೇ?"

ಬಿಲ್ಲೇಸುರರ ಪುರುಷತ್ವ ಜಾಗೃತವಾಯಿತು. ಅವರೆಂದರು, "ಬಂಗಾಳಕ್ಕೆ ಹೋಗಿದ್ದೆ. ಮನಸ್ಸು ಮಾಡಿದ್ದರೆ ಅಲ್ಲೇ ಚೆನ್ನಾಗಿ ತಳವೂರಬಹುದಿತ್ತು. ಆದರೆ ಅಪ್ಪ-ಅಜ್ಜಂದಿರ ಹೆಸರಿನ ಮೋಹವೊಂದಿರುತ್ತದಲ್ಲ? ಯಾಕೆ ಮೂಗು ಕೊಯ್ಯಿಸಿಕೊಳ್ಳಬೇಕು? ಆಗ ನೀವೇ ಅನ್ನಬಹುದಿತ್ತು, ಬಿಲ್ಲೇಸುರ ಅಪ್ಪ-ಅಜ್ಜಂದಿರ ಹೆಸರಿನ ದೀಪವನ್ನೇ ಆರಿಸಿಬಿಟ್ಟ-ಅಂತ." ಬಿಲ್ಲೇಸುರರು ಈ ಆವೇಶದಿಂದ ಒಮ್ಮೆಲೆ ವಿಷಯಾಂತರ ಮಾಡುವುದು ಕಠಿಣವಿತ್ತು, ಮುಖ್ಯ ಸುದ್ದಿಗೆ ಬರಲು ಪ್ರಯತ್ನಿಸಿ ಮತ್ತೆ ಹಿಂದೆ ಸರಿಯುತ್ತಿದ್ದರು. ಆಗ ತ್ರಿಲೋಚನರೆಂದರು, "ಇಡೀ ಊರೇ ನಿನ್ನನ್ನು ಹೊಗಳುತ್ತ ಇದೆ; ಊರಿನವರಷ್ಟೇ ಅಲ್ಲ, ಪರವೂರಿನವರೂ ಸಹ ಬಿಲ್ಲೇಸುರ ನಿಜವಾದ ಗಂಡಸು ಅನ್ನುತ್ತಾರೆ."

ಬಿಲ್ಲೇಸುರರೆಂದರು, "ಈ ಜಗತ್ತು ಹೆಸರಿಗಾಗಿ ಜೀವ ಬಿಡುತ್ತದೆ. ಇಷ್ಟೊಂದು ಕಷ್ಟವನ್ನು ನಾನೇಕೆ ಸಹಿಸುತ್ತೇನೆ? ಒಳ್ಳೆ ಹೆಸರು ಗಳಿಸುವ ಒಂದೇ ಉದ್ದೇಶಕ್ಕಾಗಿ. ನಮ್ಮಪ್ಪ ಸತ್ತರೂ ಸತ್ತಿಲ್ಲ, ಯಾಕೆ? ಇಂಥದರಲ್ಲಿ ಅವರಿಗೊಬ್ಬ ಮೊಮ್ಮಗ ಇರದಿದ್ದರೆ ಹೇಗೆ?"

ತ್ರಿಲೋಚನರೆಂದರು, "ನಿನ್ನಂತಹ ತಿಳುವಳಿಕೆಯುಳ್ಳ ಮಗ ಇದ್ದಮೇಲೆ ಮೊಮ್ಮಗನೂ ಬರಲೇಬೇಕಲ್ಲ." ಹಾಗೆಂದು ಮತ್ತೆ ಗಂಭೀರರಾದರು.

ಬಿಲ್ಲೇಸುರರೆಂದರು, "ಈ ಜಗತ್ತಿನಲ್ಲಿ ತಂದೆ ತಾಯಿಗಳೇ ದೇವರು. ತಂದೆ-ತಾಯಿ ಇರದಿದ್ದರೆ ಧರ್ಮವೆಂಬುದೂ ಇರುತ್ತಿರಲಿಲ್ಲ."

"ಈಗ ನೋಡು, ಹೊಲದಲ್ಲಿ ಕೆಲಸ ಮಾಡಲು ಹೋಗಬೇಕು, ಮನೆಗೆ ಬರಬೇಕು. ಅಲ್ಲಿ ಹೆಂಗಸಿಲ್ಲ; ಹೆಂಗಸಿಲ್ಲದಿದ್ದರೆ ಊಟ ಪದ್ಧತಿ ಪ್ರಕಾರ ಆಗುವುದೇ ಇಲ್ಲ; ಅವಸರದಲ್ಲಿ ಸರಿಯಾಗಿ ಸ್ನಾನವೂ ಆಗುವುದಿಲ್ಲ, ರೊಟ್ಟಿಯನ್ನೂ ಮಾಡಲಾ ಗುವುದಿಲ್ಲ, ಉಣ್ಣುವುದೂ ಆಗುವುದಿಲ್ಲ; ಧರ್ಮ ಹೇಗೆ ಉಳಿದೀತು?" ಬಿಲ್ಲೇಸುರರು ಉತ್ತೇಜಿತರಾಗಿ ಅಂದರು.

"ನಮಗಿದು ಬಹಳ ಮೊದಲೇ ತಿಳಿದಿತ್ತು, ಈಗ ನೀನೂ ತಿಳಿದುಕೋ" ಹೀಗೆಂದು ತ್ರಿಲೋಚನರು ತಮ್ಮ ಮೂರನೇ ಕಣ್ಣಿಗೆ ಕೆಲಸ ಕೊಟ್ಟರು.

ಬಿಲ್ಲೇಸುರರು ಒಂದು ಸಲ ತ್ರಿಲೋಚನರನ್ನು ನೋಡಿ ಹೀಗೆ ಯೋಚಿಸಿದರು, 'ನೋಡು, ದಳ್ಳಾಳಿಯಾಗಿ ಬಂದಿದ್ದಾನೆ. ಜಗತ್ತಿನಲ್ಲಿ ತಾನೇ ಜಾಣನೆಂದು ತಿಳಿದಿದ್ದಾನೆ. ಇನ್ನು ಹಣದ ಮಾತೆತ್ತುವನು. ಯಾರ ಮಗಳೋ, ಹೇಗಿರುವಳೋ, ಏನೂ ಗೊತ್ತಿಲ್ಲ. ಏನಾದರೂ ಕುಂದು ಇದ್ದಿರಲೇಬೇಕು. ಆದರೆ ಎಲ್ಲ ನಿರ್ವಹಿಸುವುದೇ ಕಷ್ಟವಾಗಿದೆ. ಹಸಿವೆಯಾಗುತ್ತದೆ, ಹಾಗಂತ ತಿನ್ನಬೇಕಾಗುತ್ತದೆ, ಮಳೆ ಆಗುತ್ತದೆ, ಬಿಸಿಲು ಬೀಳುತ್ತದೆ, ಬಿಸಿಗಾಳಿ ಬೀಸುತ್ತದೆ, ಆದ್ದರಿಂದ ಮನೆಯಲ್ಲಿರಬೇಕಾಗುತ್ತದೆ. ಮನೆ ನೋಡಿಕೊಳ್ಳುವವರು ಬೇಕೆಂದು ಮದುವೆಯಾಗಬೇಕಾಗುತ್ತದೆ. ಮನೆಕೆಲಸವನ್ನು ಹೆಂಗಸು ಮಾತ್ರ ನಿಭಾಯಿಸಬಲ್ಲಳು. ಜನ ಏನೇನೋ ಸಾಮಾನುಗಳನ್ನು ತಂದು ಮನೆ ತುಂಬಿಸುತ್ತಾರೆ; ಹೆಂಡತಿಗೆ ವಸ್ತ್ರ ಒಡವೆ ಮಾಡಿಸುತ್ತಾರೆ. ಎಲ್ಲವೂ ಬರಿ ತೋರಿಕೆಗಾಗಿ-ಈ ಡೊಳ್ಳಿನ ಒಳಗೆಲ್ಲ ಬರೀ ಪೊಳ್ಳು ತಾನೇ?' ಬಿಲ್ಲೇಸುರರಿಗೆ ಗುರು ಪತ್ನಿಯ ನೆನಪಾಯಿತು, ಊರಿನ ಮನೆ, ಮನೆಯ ಶೂನ್ಯ ಇತಿಹಾಸ ಕಣ್ಣೆದುರು ಹಾಯ್ದಿತು. ಇಲ್ಲಿಯವರೆಗೂ ಅವರು ಸುಳ್ಳು ಹೇಳುತ್ತಲಿದ್ದರು. ಅದೇ

ಕಾರಣದಿಂದಾಗಿಯೇ ಹಕ್ಕಿ ಬಲೆಯಲ್ಲಿ ಬೀಳುತ್ತಿರುವುದು. ತ್ರಿಲೋಚನರ ಉದ್ದೇಶವೇನಿದೇಯೋ ಎಂಬುದನ್ನು ಬಿಲ್ಲೇಸುರರಿಗೆ ತಿಳಿದುಕೊಳ್ಳಬೇಕಿತ್ತು. ಅವರ ಮನಸ್ಸಿನಲ್ಲೇನಿದೆಯೋ ತಿಳಿದುಕೊಳ್ಳೋಣ, ನನ್ನ ಗಂಟೇನು ಹೋಗುತ್ತದೆ, ಅಂದುಕೊಂಡು ದೀನ ಸ್ವರದಲ್ಲಿ ಅಂದರು, "ಅಣ್ಣಯ್ಯ, ಊರವರೆಲ್ಲ ನೀನು ಬಹಳ ತಿಳುವಳಿಕಸ್ಥ ಅಂತ ಅನ್ನುತ್ತಾರೆ."

ಖುಶಿಯಾಗಿ ತ್ರಿಲೋಚನರೆಂದು, "ಇಂತಹ ಹುಡುಗಿ ಈ ಊರಲ್ಲೇ ಇಲ್ಲ- ಹದಿನಾರರ ಹುಡುಗಿ, ಬೆಂಕಿಯ ಚೆಂಡು."

ಬಿಲ್ಲೇಸುರರಿಗೆ ದೇವತೆಯರ ನೆನಪು ಬಂದಿತು, ಹೀಗಾಗಿ ಒಮ್ಮೆ ವಿಚಲಿತರಾಗಿ ಮತ್ತೆ ಚೇತರಿಸಿಕೊಂಡರು.

"ನಿನ್ನ ಕಣ್ಣು ಎಂದೂ ಮೋಸ ಹೋಗಲಾರದು. ಎಲ್ಲಿಯ ಹುಡುಗಿ?"

"ಅದೆಲ್ಲಾ ಹೇಳುವುದಿಲ್ಲ. ಮದುವೆಯಾಗಲು ಹೊರಟಾಗಲೇ ನಿನಗೆ ಅದೆಲ್ಲ ಗೊತ್ತಾಗುವುದು."

"ಮೊದಲಿಗೆ ಹಣ್ಣು ಉಡಿ ತುಂಬಬೇಕಲ್ಲ, ಅದೂ ಅವಶ್ಯವಿಲ್ಲವೋ ಹೇಗೆ?"

"ಹಣ್ಣು ಉಡಿ ತುಂಬೋಣ, ಆದರೆ ಹೇಳುವುದು-ಕೇಳುವುದು ಏನೂ ಇಲ್ಲ, ತಿವಾರಿಯವರ ಮನೆತನದ ಹುಡುಗಿ. ಎಲ್ಲಾ ಕೆಲಸ ನಮ್ಮ ಮೂಲಕ ಆಗುವುದು."

"ಯಾವ ಊರಿನವಳು?"

"ಇದನ್ನು ಹೇಳಿಬಿಟ್ಟರೆ ಇನ್ನೇನು ಉಳಿಯುತ್ತದೆ? ಇದಂತೂ ಮದುವೆಗಿಂತ ಮೊದಲೇ ಗೊತ್ತಾಗುತ್ತಾದೆ. ಆದರೊಂದು ಮಾತು. ಅವರ ಬಳಿ ಮದುವೆ ಮಾಡಲು ಹಣವಿಲ್ಲ. ಒಳ್ಳೆಯ ಜನ. ಹುಡುಗಿಯನ್ನೇನೂ ಮಾರುವುದಿಲ್ಲ, ಆದರೆ ಖರ್ಚು ನೀನೇ ಕೊಡಬೇಕು."

"ಎಷ್ಟು?"

ತ್ರಿಲೋಚನರು ಲೆಕ್ಕ ಹಾಕತೊಡಗಿದರು, ಹಾಗೆಯೇ ಬಾಯಿಂದ ಹೇಳುತ್ತ ಹೋದರು, "ನಿನ್ನ ಮನೆಗೆ ಉಡಿ ತುಂಬಿಸಿಕೊಳ್ಳಲು ಬಂದಾಗ ನಮ್ಮ ಮನೆಯಲ್ಲಿ ಉಳಿದುಕೊಳ್ಳಲಿ. ತಟ್ಟೆಯಲ್ಲಿ ಏಳು ರೂಪಾಯಿ ಇಡಬೇಕು, ತೆಂಗಿನಕಾಯಿಯೊಂದಿಗೆ ಒಂದು ಖಣ ಇಡಬೇಕು. ಇಷ್ಟಕ್ಕೆ ಇಪ್ಪತ್ತು ರೂಪಾಯಿ ಖರ್ಚಾದೀತು. ಇದನ್ನು ನೀನು ಉಡಿ ತುಂಬಿಸುವುದಕ್ಕೆ ಏಳು ದಿನ ಮೊದಲೇ ಕೊಡಬೇಕು. ಹಣ್ಣು ಉಡಿ ತುಂಬಿದ ನಂತರ ಆ ದಿನವೇ ಮದುವೆಯ ಖರ್ಚಿಗೆಂದು ಒಂದೂವರೆ ನೂರು ರೂಪಾಯಿ ಕೊಡಬೇಕು, ಎಲ್ಲಾ ನನ್ನ ಮೂಲಕ. ಒಳ್ಳೆ ಜನ, ಆದರೆ ಎಲ್ಲಾ ನಿಭಾಯಿಸಲಾರರು. ನಿನ್ನೆದುರು ಕೈಚಾಚಿ ಹೇಗೆ ಕೇಳಿಯಾರು? ಪದ್ಧತಿ ಪ್ರಕಾರ ಮದುವೆಯ ಶಾಸ್ತ್ರ, ಊಟ ಮತ್ತು ದಿಬ್ಬಣಿಗರ ಖರ್ಚು, ಪಾತ್ರೆ-ಪಡಗ ಇತ್ಯಾದಿಗೆ ಒಂದೂವರೆ ನೂರು, ಇಷ್ಟೆಂದರೆ ಏನೂ ಹೆಚ್ಚಲ್ಲ, ನಿನ್ನನ್ನೂ ಕಡೆ ಗಣಿಸಬಾರದಲ್ಲ? ಕುಲದಲ್ಲಿ ನಿನಗಿಂತ ಹೆಚ್ಚಿನವರು."

ಬಿಲ್ಲೇಸುರರೆಂದರು, "ಕುಲದಲ್ಲಿ ಹೆಚ್ಚಿನವರಾದರೆ ಮದುವೆ ಸರಿಹೊಂದಲಾರದು. ಹಣವಿಲ್ಲದ್ದರಿಂದ ಮನ್ನೂ ವಾಜಪೇಯಿ ಕೆಳಗಿನ ಕುಲದವರಿಗೆ ಹೆಣ್ಣು ಕೊಟ್ಟು, ಆ ಹುಡುಗಿ ವಿಧವೆಯಾಗಿಬಿಟ್ಟಳಲ್ಲ. ಅಣ್ಣಯ್ಯ, ನನಗಿದೇ ದೊಡ್ಡ ಹೆದರಿಕೆ..."

ತ್ರಿಲೋಚನರ ಮುಖ ಸಪ್ಪಗಾಯಿತು. ಅವರೆಂದರು, "ವ್ಯರ್ಥವಾಗಿ ಹೆದರುತ್ತಿರುವಿ. ಈ ದೊಡ್ಡ ಕುಲದವರೆಲ್ಲ ಹುಟ್ಟಿನಿಂದಲೇ ದೊಡ್ಡವರಲ್ಲ, ನಡುವೆಯೇ ದೊಡ್ಡವರಾದವರು, ಮನ್ನೂ ವಾಜಪೇಯಿಯ ಮಗಳು ಗಂಡನನ್ನು ಕೊಂದುಹಾಕಿದಳು. ಆಕೆಗೆ ವಯಸ್ಸಾಗಿತ್ತಂತೆ, ತವರಿನಲ್ಲೇ ಕೆಟ್ಟು ಕೆಳಗಿನ ಕುಲದ ಗಂಡಿಗೆ ಕೊಟ್ಟು ಮದುವೆ ಮಾಡಿದ್ದನಂತೆ. ತನ್ನ ಗೆಣೆಯನ ಮಾತು ಕೇಳಿ, ಗಂಡನಿಗೆ ವಿಷ ಹಾಕಿದಳಂತೆ. ಆತ ತುಸು ದಿನದಿಂದ ಜಡ್ಡಾಗಿ ಮಲಗಿದ್ದ. ಔಷಧಿ ನಡೆದಿತ್ತು."

"ಈಕೆಯೂ ನನಗೆ ಹಾಗೆಯೇ ಮಾಡಿದರೆ!" ಬಿಲ್ಲೇಸುರರು ಸಂಶಯದಿಂದ ನೋಡತೊಡಗಿದರು.

"ಯಾವ ರೀತಿಯ ಭಯವೂ ಬೇಡವೆಂದು ಹೇಳುತ್ತಿದ್ದೇನಲ್ಲ. ನಾನು ಮಧ್ಯಸ್ಥಿಕೆ ಮಾಡಿದ್ದೇನೆ. ಹುಡುಗಿಯಲ್ಲಿ ಯಾವ ತರದ ಕುಂದೂ ಇಲ್ಲ, ಕಳಂಕವೂ ಇಲ್ಲ, ನಡತೆ-ಗಿಡತೆ ಕೆಟ್ಟವಳಲ್ಲ, ಕಪ್ಪು ಬಣ್ಣದವಳಾಗಲೀ ಕುರುಡಿ-ಕುಂಟಿ-ಮೂಗಿಯಾಗಲೀ ಅಲ್ಲ."

"ನೀನು ಹೇಳುತ್ತಿರುವಿಯೆಂದ ಮೇಲೆ ಹದಿನಾರಾಣೆ ವಿಶ್ವಾಸವಿದೆ. ಆದರೆ ಅವರ ಹೆಸರು-ಕುಲ ಏನೂ ಗೊತ್ತಿರದಿದ್ದರೆ ಮದುವೆಗೆ ಮೊದಲೇ ಬಂದಿಳಿಯುವ ಬಂಧು-ಬಾಂಧವರಿಗೆ ಏನೆಂದು ಹೇಳಲಿ? ತ್ರಿಲೋಚನರಿಗೇ ಎಲ್ಲಾ ಗೊತ್ತೆಂದು ಹೇಳುವುದು ಸರಿ ಕಾಣದು; ಅದಕ್ಕೇ ಅವರ ವಿವರ ಕೇಳುತ್ತಿರುವೆ. ಇನ್ನೊಂದು ಮಾತು, ಜಾತಕಗಳನ್ನು ಹೊಂದಿಸಿ ನೋಡಬೇಕು. ಹುಡುಗಿಯ ಜಾತಕ ತಗೊಂಡು ಬಾ! ನಾನು ಎದುರಿಗೆ ಕೂತೇ ಕೇಳಿಸುತ್ತೇನೆ. ಹುಡುಗಿಗೆ ಕುಜದೋಷವೇನಾದರೂ ಇದ್ದರೆ ನಾನು ವ್ಯರ್ಥ ಸಾಯಬೇಕಾಗುವುದಲ್ಲ? ಮದುವೆ ಆಗುವುದೆಂದ ಮೇಲೆ ಸರಿಯಾಗಿ ಕಣ್ಣು ತೆರೆದು ನೋಡಿಯೇ ಆಗಬೇಕು."

ತ್ರಿಲೋಚನರಿಗೆ ಒಳಗೊಳಗೇ ಬಹಳ ಸಿಟ್ಟು ಬಂದಿತು. ಅವರೆಂದರು, "ತೀರ ಹುಡುಗಾಟದ ಮಾತು ಆಡುತ್ತೀಯಲ್ಲ. ಇವರು ನಿನ್ನ ಕಡೆ ಬರುವುದಿಲ್ಲ ಎಂದಾದರೆ ಇನ್ನೆಂದೂ ಯಾವ ಸಜ್ಜನರೂ ಬರಲಾರರು. ಗೂಳಿಯ ಹಾಗೆ ಬೇಕಾಬಿಟ್ಟಿ ಎಲ್ಲ ಕಡೆ ತಿರುಗುತ್ತೀ, ನಿನ್ನದೂ ಒಂದು ಮನೆ ಅಂತಾಗಲಿ-ಅಂತ ನನ್ನ ಮನಸ್ಸಿತ್ತು. ಆದರೆ ನಿನ್ನ ನಿಜಸ್ವರೂಪ ತೋರಿಸಿಯೇ ಬಿಟ್ಟೆಯಲ್ಲ. ನಿನಗೇ ಕುಜದೋಷವಿದೆ ಅಂತ ಸಿದ್ಧವಾದರೆ? ಯಾವ ತಂದೆ ನಿನಗೆ ಮಗಳನ್ನು ಕೊಟ್ಟಾನು? ಇನ್ನು ಬಂಧು-ಬಾಂಧವರ ಮಾತು-ಇದನ್ನಂತೂ ನಾನು ಹದಿನಾರಾಣೆ ಮೂರ್ಖತನ ಅನ್ನುತ್ತೇನೆ. ಕೂತಲ್ಲೇ ಇಪ್ಪತ್ತೈದು ರೂಪಾಯಿಯ ಖರ್ಚು ತಲೆ ಮೇಲೆ. ನಾನೆನ್ನುತ್ತೇನೆ-ಸುಮ್ಮನೆ ನಡೆ, ಮದುವೆ ಮಾಡಿಕೊಂಡು ಬಾ. ಹುಡುಗಿಯ ತಂದೆಯ ಹೆಸರು ತಿಳಿದುಕೊಳ್ಳಬೇಕಿದ್ದರೆ ನಡೆ, ಅವರ ಮನೆಯನ್ನೂ ನೋಡಿ ಬಾ. ಆದರೆ ನೀನೇ ಹೋಗುವುದು ಸರಿ ಕಾಣುವುದಿಲ್ಲ, ಊರ ಜನ ನಿಮ್ಮನ್ನು ನೋಡಿ ನಗುವರು."

ಬಿಲ್ಲೇಸುರರಿಗೆ ಸ್ವಲ್ಪ ವಿಶ್ವಾಸ ಹುಟ್ಟಿತ್ತು. ಆದರೆ ಹಣದ ವಿಷಯ ಯೋಚಿಸಿ ತುಸು ಹಿಂದೇಟು ಹಾಕಿದರು. ಹುಡುಗಿಯ ರೂಪದ ಮೋಹವು ಅವರನ್ನು ಕಟ್ಟಿಹಾಕಿತ್ತು, ನೂರಾರು ಮೊಗ್ಗುಗಳು ಅರಳತೊಡಗಿದ್ದವು, ಸುವಾಸನೆ ಬೀರತೊಡಗಿದ್ದವು. ಆದರೆ ತ್ರಿಲೋಚನರ

ಮೇಲೆ ಪೂರಾ ವಿಶ್ವಾಸ ಹುಟ್ಟುತ್ತಿರಲಿಲ್ಲ. ಅವರು ಕೇಳಿದರು, "ಇಲ್ಲಿಂದ ಎಷ್ಟು ದೂರ?"

"ಮೂರು-ನಾಲ್ಕು ಹರಿದಾರಿ ಆದೀತು."

ಬಿಲ್ಲೇಸುರರು ಯೋಚಿಸಿದರು, ಒಂದೇ ದಿನದಲ್ಲಿ ಹೋಗಿ ತಿರುಗಿಯೂ ಬರಬಹುದು. ಆಡುಗಳಿಗೇನೂ ವಿಶೇಷ ತೊಂದರೆಯಾಗಲಾರದು. ಎಲೆಗಳನ್ನು ಕೊಯ್ದು ತಂದು ಹಾಕಿ ಹೋದರಾಯಿತು. ಅವರೆಂದರು, "ಹಾಗಿದ್ದರೆ ನಡೆಯಣ್ಣಾ, ನೋಡಿ ಬರೋಣ, ನೀನು ಎಂದು ಹೇಳುತ್ತೀಯೋ ಅಂದು ತಯಾರಿರುವೆ."

ತ್ರಿಲೋಚನರು ಲೆಕ್ಕ ಹಾಕಿ ಹೇಳಿದರು, "ಇಂದಿನಿಂದ ನಾಲ್ಕನೇ ದಿನಕ್ಕೆ ಹೊರಡೋಣ."

## ಹನ್ನೆರಡು

ಆ ರಾತ್ರಿ ಬಿಲ್ಲೇಸುರರಿಗೆ ನಿದ್ದೆ ಬರಲಿಲ್ಲ. ಅದೇ ರೂಪವನ್ನು ಬಗೆಗಣ್ಣಿನಲ್ಲಿ ನೋಡುತ್ತಲಿದ್ದರು. ಬಹಳ ಬೆಳ್ಳಗಿದ್ದಾಳಂತೆ. ಹಾಗೆಂದುಕೊಳ್ಳುತ್ತ ಅವರಿಗೆ ರಾಮರತನರ ಹೆಂಡತಿಯ ನೆನಪಾಯಿತು. ಹದಿನಾರು ವರ್ಷದವಳು, ಅಂದಾಗ ಮತ್ತೆ ರಾಮರತನ ಸುಕುಲರ ಮಗಳ ರೂಪ ಕಣ್ಣೆದುರು ಬಂದಿತು. ಪುಖರಾಜಬಾಯಿಯ ಮಗಳು ಹಸೀನಾಳ ಹಾಗೆ ದೊಡ್ಡ-ದೊಡ್ಡ ಕಣ್ಣುಗಳಿರಬಹುದು. ಈ ಮನೆಗೆ ಬಂದರೆ ಮನೆಯಲ್ಲಿ ಬೆಳಕಾಗುವುದು. ಆಡಿನ ಮರಿಗಳನ್ನಿಡುವ ಕೊಠಡಿಯಲ್ಲಿ ಆಕೆಯ ಸಾಮಾನುಗಳನ್ನಿಡಬಹುದು. ಮರಿಗಳು ಪಡಸಾಲೆಯಲ್ಲಿರಬಹುದು. ಒಂದು ಚಪ್ಪರ ಹಾಕಿದರೆ ಎಲ್ಲಾ ಋತುಗಳಲ್ಲೂ ಆರಾಮವಾಗಿರಬಹುದು.

ಆದರೆ ಆಡುಗಳ ಮಲಮೂತ್ರಗಳ ವಾಸನೆಯನ್ನು ಸಹಿಸುತ್ತ ಇಂತಹ ಹೆಂಗಸು ಒಂದು ದಿನವೂ ಈ ಮನೆಯಲ್ಲಿರಲಾರಳು ಅಂತ ಬಿಲ್ಲೇಸುರರಿಗೆ ಒಂದು ಸಲವೂ ಅನ್ನಿಸಲಿಲ್ಲ.

ಮುಂಜಾನೆ ಎದ್ದು ಪಕ್ಕದ ಊರಿನ ಬಟ್ಟೆ ಅಂಗಡಿಯವನ ಕಡೆ ಹೋಗಿ ಜುಬ್ಬಾದ ಬಟ್ಟೆ ಕೊಂಡರು, ಗುಲಾಬಿ ಬಣ್ಣದ ಪಗಡಿಯನ್ನೂ ಒಂದು ಧೋತರವನ್ನೂ ಕೊಂಡರು. ದರ್ಜಿಗೆ ಜುಬ್ಬಾದ ಅಳತೆ ಕೊಟ್ಟರು. ಅದೇ ದಿನ ಹೊಲಿದು ಕೊಡಬೇಕೆಂದು ಹೇಳಿದರು. ಊರಿನ ಮೋಚಿಯಿಂದ ಒಂದು ಜೋಡಿ ಚಪ್ಪಲಿ ಕೊಂಡರು.

ಒಂದೆಡೆ ಇದೆಲ್ಲವನ್ನು ಮಾಡುತ್ತ, ಇನ್ನೊಂದೆಡೆ ಆ ತ್ರಿಲೋಚನ ಎಲ್ಲಿ ಹೋದನೆಂದು ಚಿಂತಿಸುತ್ತಲಿದ್ದರು. ಮೂರನೆಯ ದಿನ ತ್ರಿಲೋಚನರು ಮನೆಯಿಂದ ಹೊರಬಿದ್ದರು. ಅವರ ಉಡುಗೆ ಹಾಗೂ ಕೈಯಲ್ಲಿನ ಬಡಿಗೆಯನ್ನು ನೋಡಿ ಬಿಲ್ಲೇಸುರರು ಅಂದುಕೊಂಡರು. ಈಗ ಈತ ಹೊರಟಿದ್ದಾನೆ, ಮಾತುಕತೆ ಮುಗಿಸಿಕೊಂಡು ಬಂದು ನಾಳೆ ಇವರನ್ನು ಕರೆದೊಯ್ಯುತ್ತಾನೆ. ಆತ ಹೊರಟ ದಿಕ್ಕು ನೋಡಿ ತಮ್ಮ ನಿತ್ಯದ ಉಡುಗೆಯಲ್ಲೇ ದೂರದಿಂದ ಆತನನ್ನು ಹಿಂಬಾಲಿಸಿದರು. ತ್ರಿಲೋಚನ ಬಾಬುಗಳು ಪುರವಾದ ನೇರವಾದ ಕಚ್ಚಾ ರಸ್ತೆ ಬಿಟ್ಟು ತಿರುಗಿಕೊಂಡರು. ಬಿಲ್ಲೇಸುರರು ಪುರವಾದ ಅಂಚಿಗೆ ನಿಂತು ನೋಡಿದರು- ಬೇರೆ ಊರಿಗೆ ಹೋಗಲೆಂದು ತ್ರಿಲೋಚನರು ಪುರವಾದ ಹೊರಗೆ ಹೊರಟದ್ದು ಕಾಣಲಿಲ್ಲ, ಆಗ ಈ ಸಂಬಂಧ ಇಲ್ಲೇ ಇರಬಹುದೆಂದು ಬಿಲ್ಲೇಸುರರಿಗೆ ಅನಿಸಿತು. ಅವರೂ ಊರಿನೊಳಗೆ

ಹೋದರು. ಅಗಸಿ ಬಾಗಿಲಲ್ಲಿ ಒಬ್ಬ ವ್ಯಕ್ತಿ ಭೆಟ್ಟಿಯಾದ. ಬಿಲ್ಲೇಸುರರು ಕೇಳಿದರು, "ಇಲ್ಲಿ ಶ್ಯಾಮಪುರದ ತ್ರಿಲೋಚನರು ಬಂದಿದ್ದಾರೆಯೇ?" ಆ ವ್ಯಕ್ತಿ "ಹೌದು, ಆ ಠಕ್ಕ ಅಲ್ಲಿ ರಾಮನಾರಾಯಣರ ಮನೆಯಲ್ಲಿ ಕೂತಿದ್ದಾನೆ. ಇಬ್ಬರೂ ಒಂದೇ ಜಾತಿ. ಯಾರದ್ದಾದರೂ ಕೊರಳು ಕೊಯ್ಯುವ ಹಂಚಿಕೆ ಹಾಕುತ್ತಿದ್ದಾರು" ಎಂದನು.

ಬಿಲ್ಲೇಸುರರ ಎದೆ ಧಸ್ಸೆಂದಿತು. ಕೇಳಿದರು, "ರಾಮನಾರಾಯಣರಿಗೆ ಹೆಣ್ಣು ಮಕ್ಕಳು-ಗಂಡು ಮಕ್ಕಳು ಯಾರಾದರೂ ಇದ್ದಾರೆಯೇ?"

ಆ ವ್ಯಕ್ತಿ ಬೆಚ್ಚಿಬಿದ್ದು ಬಿಲ್ಲೇಸುರರತ್ತ ನೋಡಿದ, "ನೀನು ಎಲ್ಲಿಂದ ಬಂದಿರುವಿ? ನಿನಗೆ ರಾಮನಾರಾಯಣನ ಬಗ್ಗೆ ಗೊತ್ತಿಲ್ಲವೆ? ಆ ಸೂಳೇಮಗನಿಗೆ ಎಲ್ಲಿಯ ಮಕ್ಕಳು-ಮರಿ! ಅವನ ಲಗ್ನವಾದರೂ ಆಗಿದೆಯೇ ಅಂತ ಕೇಳು."

ಇಷ್ಟಂದು ಆತ ಮುಂದೆ ಹೋದ. ಬಿಲ್ಲೇಸುರರಿಗೆ ಬಹಳ ಸಂತಾಪವಾಯಿತು. ಅವರು ಅದೇ ದಿಕ್ಕಿನಿಂದ ಮನ್ನಿಯ ಅತ್ತೆ ಮನೆಗೆ ಹೋದರು. ಮನ್ನಿಯ ಅತ್ತೆಯನ್ನು ಭೆಟ್ಟಿಯಾದರು. ಕಷ್ಟ-ಸುಖದ ಮಾತುಕತೆಗಳಾದವು. ಬಿಲ್ಲೇಸುರರು ಗಟ್ಟಿ ಮನಸ್ಸು ಮಾಡಿ ಹೇಳಿದರು, ಖರ್ಚಿಗೆ ಹಣವಿಲ್ಲದಿದ್ದರೆ ನನ್ನ ಕಡೆ ಬಂದು ತೆಗೆದುಕೋ ಎನ್ನುತ್ತಾ ಒಂದು ರೂಪಾಯಿ ಆಕೆಯ ಕೈಯಲ್ಲಿಟ್ಟರು. ಮನ್ನಿ ಚೆನ್ನಾಗಿದ್ದಾರೆಂದು ಹೇಳಿದರು. ಅವರ ಮಗಳನ್ನು ಮನ್ನಿ ಬಹಳ ಚೆನ್ನಾಗಿ ನೋಡಿಕೊಳ್ಳುತ್ತಾರೆ, ಒಳ್ಳೆ ಆರೈಕೆ ಮಾಡುತ್ತಾರೆ. ಈಗ ಆಕೆ ದೊಡ್ಡವಳಾಗಿದ್ದಾಳೆ.

ಮನ್ನಿಯ ಅತ್ತೆಗೆ ಖುಶಿಯಾಯಿತು. ಹಣವನ್ನು ಎತ್ತಿಟ್ಟು ಕೇಳಿದಳು, ಸಂಸಾರ ಹೂಡಿರುವಿಯೋ ಇಲ್ಲವೋ? ತಾಯಿ-ತಂದೆಗಳು ಮದುವೆ ಮಾಡಿದಾಗಲ್ಲವೆ ಸಂಸಾರ ಹೂಡುವುದು? ಮನ್ನಿಯ ಅತ್ತೆ ತಾನು ಹತ್ತು-ಹದಿನೈದು ದಿನಗಳಲ್ಲಿ ಬಂದು ಮದುವೆಯ ಬಗ್ಗೆ ಮಾತಾಡುವೆನೆಂದು ಹೇಳಿದಳು. ಬಿಲ್ಲೇಸುರರು ಆಕೆಗೆ ನಮಸ್ಕರಿಸಿ ಅಲ್ಲಿಂದ ಹೊರಟರು.

## ಹದಿಮೂರು

ಮರುದಿನ ಬಂದ ತ್ರಿಲೋಚನರು, "ಬಿಲ್ಲೇಸುರ, ನೀನು ತಯಾರಾಗು" ಅಂದರು.

ಬಿಲ್ಲೇಸುರರು, "ನಾನು ಮೊದಲೇ ತಯಾರಿರುವೆ" ಅಂದರು.

ತ್ರಿಲೋಚನರು ಖುಶಿಯಿಂದ, "ಹಾಗಿದ್ದರೆ ಒಳ್ಳೇದಾಯಿತು. ನಡೆ" ಅಂದರು.

ಬಿಲ್ಲೇಸುರರೆಂದರು, "ಅಣ್ಣಯ್ಯ, ಮನ್ನಿಯ ಅತ್ತೆಯ ಅಣ್ಣನ ಮಗಳ ಅತ್ತೆ ಮನೆಯಲ್ಲಿ ಒಂದು ಕನ್ಯೆ ಇದೆ, ನಿನ್ನೆ ಬಂದಿದ್ದರು. ಮಾತುಕತೆ ಗಟ್ಟಿ ಮಾಡಿಕೊಂಡು ಹೋದರು, ನೀನು ನನ್ನನ್ನು ಕ್ಷಮಿಸಿಬಿಡು."

ತ್ರಿಲೋಚನರು ಸಿಟ್ಟಾದರು, "ಹಾಗಿದ್ದರೆ ಆ ಸಂಬಂಧದಲ್ಲಿ ಖಂಡಿತವಾಗಿ ಮೋಸವಿರಬೇಕು, ಹುಡುಗಿಯಲ್ಲೂ ಐಬು ಇರಬೇಕು. ನಾನು ಖಂಡಿತ ಹೇಳಬಲ್ಲೆ." ಬಿಲ್ಲೇಸುರರು ಮುಗುಳ್ನಕ್ಕು ಹೇಳಿದರು, "ಮತ್ತೆ ನೀನು ತಂದ ಸಂಬಂಧವೇನು ಬಹಳ ಶುದ್ಧವಾದದ್ದೇ? ಮನ್ನಿಯ ಅತ್ತೆಯ ಅಣ್ಣನ ಮಗಳ ಅತ್ತೆ ಮನೆಯ ಕನ್ಯೆಯಲ್ಲಿ ಐಬು ಇದೆ ಅಲ್ಲವೇ? ಇನ್ನು ತಂದೆ ಯಾರೋ, ತಾಯಿ ಯಾರೋ. ಊರು ಯಾವುದೋ, ಕುಲ

ಯಾವುದೋ, ಏನೂ ಗೊತ್ತಿಲ್ಲದ ಹುಡುಗಿಯ ಸಂಬಂಧ ನೀನು ತಂದಿರುವಿಯಲ್ಲ, ಅವಳಲ್ಲೇನು ಅಷ್ಟೈಶ್ವರ್ಯವಿದೆ?''

"ನೋಡು, ಆಮೇಲೆ ಪಶ್ಚಾತ್ತಾಪ ಪಡುವಿ.'' ತ್ರಿಲೋಚನರು ಜೋರಾಗಿ ಅಂದರು.

"ಪಶ್ಚಾತ್ತಾಪಪಡುವಂಥ ಕೆಲಸ ನಾನು ಮಾಡುವುದೇ ಇಲ್ಲ; ಬಹಳ ವಿಚಾರ ಮಾಡಿ ಮುಂದಡಿಯಿಡುತ್ತೇನೆ ಅಣ್ಣಯ್ಯಾ'' ಬಿಲ್ಲೇಸುರರು ತೀಕ್ಷ್ಣವಾಗಿ ಉತ್ತರಿಸಿದರು.

"ಅಲ್ಲ, ಒಮ್ಮೆ ಬಂದು ಹುಡುಗಿಯನ್ನಾದರೂ ನೋಡಲ್ಲ, ನಿನಗೆ ತೋರಿಸಿಬಿಡುವೆ.''

"ಈಗ ಹುಡುಗಿ ಇರಲಿ, ಆಕೆಯ ಅಜ್ಜಿಯನ್ನು ತೋರಿಸಿದರೂ ನಾನು ಬರಲಾರೆ. ಮನೆಯಲ್ಲೇ ಸಂಬಂಧಿಕರಲ್ಲೇ ಕನ್ಯೆ ಇದ್ದಾಗ ಬೇರೆ ಕಡೆ ಹೋಗಬಾರದು. ಹಾಗೆ ಮಾಡಿದರೆ ಧರ್ಮ ಬಿಟ್ಟಂತಾಗುವುದು. ಸದ್‌ಗೃಹಸ್ಥರ ಮನೆಯ ಕನ್ಯೆಯ ರೂಪ ಮುಖ್ಯವಲ್ಲ, ಗುಣ ಮುಖ್ಯ. ರೂಪವತಿಯಾದ ಕನ್ಯೆಯ ನಡತೆ ಚೆನ್ನಾಗಿರುವುದಿಲ್ಲ ಅಂತ ಅನ್ನುತ್ತಾರೆ.''

"ಹಾಗಿದ್ದರೆ ನಿನಗಾಗಿ ಇಲ್ಲಿ ಸಾವಿತ್ರಿಯೇ ಬರುತ್ತಿದ್ದಾಳೇನೋ. ಊರಿನ ಲಫಂಗರೆಲ್ಲಾ ಬೆನ್ನು ಹತ್ತುತ್ತಾರೆ ಆಕೆಗೆ. ನೋಡುತ್ತಿರು.''

"ಅದೆಲ್ಲ ನನಗೆ ಗೊತ್ತು. ಆದರೆ ಮನೆಯ ಸಾಮಾನು ತಗೊಂಡು ಓಡಿಯಂತೂ ಹೋಗುವವಳಲ್ಲ, ಏನು ಕಷ್ಟ ಬಂದರೂ ಸಹಿಸಿಯಾಳು. ಯಾರದಾದರೂ ಧರ್ಮವನ್ನು ಕೆಡಿಸಬೇಕು ಅಂದರೆ ಅದು ಕೆಡುವುದಿಲ್ಲ. ಊರಲ್ಲಿನ ಎಲ್ಲರ ಬಣ್ಣವೂ ನನಗೆ ಗೊತ್ತು.''

"ನೀನು ಎಲ್ಲರನ್ನೂ ದೂಷಿಸುತ್ತಿರುವೆ.''

"ನಾನು ಯಾರನ್ನೂ, ದೂಷಿಸುತ್ತಿಲ್ಲ. ಕೇವಲ ಸತ್ಯ ಹೇಳುತ್ತಿರುವೆ.''

"ಹಾಗಿದ್ದರೆ ಹೇಳು, ನಾನು ಮಾಡಿದ ತಪ್ಪೇನು? ಇಲ್ಲವೆಂದರೆ-''

"ನೀನಿಲ್ಲಿಂದ ಹೊರಟುಹೋಗು. ಇಲ್ಲವಾದರೆ ನಾನು ಚೌಕೀದಾರನಿಗೆ ಹೇಳಬೇಕಾದಿತು.''

ಚೌಕೀದಾರನ ಹೆಸರು ಕೇಳುತ್ತಲೇ ತ್ರಿಲೋಚನರು ಹೊರಟುಬಿಟ್ಟರು. ಅಪಮಾನ ಹಾಗೂ ಸಿಟ್ಟಿನಿಂದ ತಿರುತಿರುಗಿ ನೋಡುತ್ತಾ ಹೋದರು.

ಬಿಲ್ಲೇಸುರರು ತಮ್ಮ ಕೆಲಸಕ್ಕೆ ಹೊರಟರು.

## ಹದಿನಾಲ್ಕು

ಕಾರ್ತಿಕಮಾಸ ಪ್ರಾರಂಭವಾಗುತ್ತಲೇ ಮನ್ನಿಯ ಅತ್ತೆ ಬಂದಳು. ಅತ್ತಿತ್ತ ತಿರುಗಾಡಿ, ಅವರಿವರನ್ನು ಕೇಳುತ್ತ, ಮನೆಯ ವಿಳಾಸ ಹುಡುಕಿಕೊಂಡು ಬಂದಳು. ಬಿಲ್ಲೇಸುರರು ಆಕೆಯನ್ನು ಕಂಡೊಡನೆ ತಟ್ಟನೆ ಬಾಗಿ ಪಾದಮುಟ್ಟಿ ನಮಸ್ಕರಿಸಿದರು. ಮನೆಯ ಒಳಗೆ ಕರೆದೊಯ್ದರು. ಹೊರಸನ್ನು ಹಾಕಿದರು. ಅದರ ಮೇಲೊಂದು ಜಮಖಾನೆ ಹಾಕಿ "ಅಮ್ಮಾ, ಕೂತುಕೋ'' ಅಂದರು. ಹೊರಸಿನ ಮೇಲೆ ಕೂಡುತ್ತ ಮನ್ನಿಯ ಅತ್ತೆ ಕೇಳಿದಳು, "ನೀನು ನಿಂತೇ ಇರುತ್ತೀಯಾ?'' ಬಿಲ್ಲೇಸುರರೆಂದರು, "ಗಂಡು ಮಕ್ಕಳು ನಿಂತೇ ಇರಬೇಕು. ನಿಮಗೆ ಮಗಳಿದ್ದರೇನಾಯಿತು? ಮಗಳು ಮಗನೂ ಇಬ್ಬರೂ ಒಂದೇ. ಆಕೆ ನನಗಿಂತ ಹಿರಿಯಳೇ

ಸರಿ. ಹೀಗಾಗಿ ನೀವು ಧರ್ಮದಿಂದ ನನಗೆ ತಾಯಿಯಾಗಬೇಕು. ಹುಟ್ಟಿಸಿದವಳು ಪಾಪದ ತಾಯಿಯಂತೆ. ನೀನು ಕೂತಿರು, ನಾನು ಈಗಲೇ ಬಂದೆ.''

ಬಿಲ್ಲೇಸುರರು ಊರಿನ ಕಿರಾಣಿ ಅಂಗಡಿಗೆ ಹೋಗಿ ಒಂದು ಪಾವು ಸಕ್ಕರೆ ಕೊಂಡರು. ತಿರುಗಿ ಬಂದು ಒಂದು ಲೋಟದ ತುಂಬ ಆಡಿನ ಹಾಲಲ್ಲಿ ಸಕ್ಕರೆ ಕರಗಿಸಿ ಹೊರಸಿನ ತಲೆದಿಸೆಗೆ ಇಟ್ಟರು. ಗ್ಲಾಸಿನಲ್ಲಿ ನೀರುಕೊಟ್ಟು, ''ತಗೊಳಮ್ಮಾ, ಬಾಯಿ ಮುಕ್ಕಳಿಸು. ಕೈಕಾಲು ತೊಳೆಯುವುದಿದ್ದರೆ ಚೆಂಬಿನಲ್ಲಿ ನೀರು ಇಟ್ಟಿದೆ, ಗ್ಲಾಸಿನಲ್ಲಿ ನೀರು ತಗೊಂಡು ತೊಳಕೊಂಡು ಬಾ'' ಎನ್ನುತ್ತಾ ಹಾಲಿನ ಲೋಟ ಎತ್ತಿಕೊಂಡರು. ಮನ್ನಿಯ ಅತ್ತೆ ಕೈಕಾಲು ತೊಳೆದಳು. ಬಿಲ್ಲೇಸುರರು ಲೋಟದಿಂದ ಹಾಲು ಬಗ್ಗಿಸಿಕೊಟ್ಟರು, ಆಕೆ ಕುಡಿಯ ತೊಡಗಿದಳು. ಕುಡಿದಾದ ನಂತರ ಹೇಳಿದಳು, ''ಮಗೂ, ನಾನು ಆಡಿನ ಹಾಲನ್ನೇ ಕುಡಿಯುತ್ತೇನೆ. ಇದು ಬಹಳ ಒಳ್ಳೆಯದು, ಅನೇಕ ರೋಗಗಳನ್ನು ಪರಿಹರಿಸುತ್ತದೆ.''

ಸಂಜೆಯಾಗತೊಡಗಿತ್ತು. ಆಕಾಶ ಸ್ವಚ್ಛವಾಗಿತ್ತು. ಹುಣಿಸೆಮರದ ಮೇಲೆ ಗುಬ್ಬಿಗಳು ಕುಳಿತಿದ್ದವು. ಬಿಲ್ಲೇಸುರರು ಆಕಾಶದ ಕಡೆ ನೋಡಿ ಹೇಳಿದರು, ''ಇನ್ನೂ ಹೊತ್ತಿದೆ. ಅಮ್ಮಾ ನೀನು ಕೂತಿರು. ನಾನೀಗಲೇ ಬಂದೆ. ಆಡುಗಳ ಕಡೆ ನಿಗವಿರಲಿ. ಬಾಗಿಲನ್ನು ಒಳಗಿನಿಂದ ಹಾಕಿಕೊಂಡುಬಿಡು. ತಿರುಗಿ ಬಂದು ಕೂಗಿ ತೆರೆಯಿಸುವೆ. ಇಲ್ಲಿ ಆಡುಗಳ ಕಳ್ಳರು ಬಹಳ, ಚಾಲಾಕಿಯಿದ್ದಾರೆ.'' ಬಿಲ್ಲೇಸುರರು ಹೊರಗೆ ಹೊರಟರು. ಅತ್ತೆ ಬಾಗಿಲು ಹಾಕಿಕೊಂಡಳು.

ದಾರಿಯಲ್ಲಿನ ಹೊಲಗಳನ್ನು ಒಂದೊಂದಾಗಿ ದಾಟಿ ರಾಮಗುಲಾಮನ ತೋಟಕ್ಕೆ ಬಂದರು. ರಾಮಗುಲಾಮ ಕೇಳಿದ, ''ಸೌತೆಯಿದೆ, ಹಾಗಲಕಾಯಿ ಇದೆ, ಏನು ಬೇಕು?'' ಬಿಲ್ಲೇಸುರರೆಂದರು, ''ಒಂದು ಸೇರು ಎಳೆಯ ಸೌತೆಕಾಯಿ ಕೊಡು.'' ರಾಮಗುಲಾಮ ಸೌತೆಕಾಯಿ ಕೀಳುತ್ತಿದ್ದಾಗ ಬಿಲ್ಲೇಸುರರು ಬದನೆಕಾಯಿಯ ಹಸಿರು ಗಿಡಗಳನ್ನು ನೋಡುತ್ತಲಿದ್ದರು. ಒಂದೊಂದು ಗಿಡವೂ ಸೆಟೆದು ನಿಂತು, ಈ ಜಗತ್ತಿನಲ್ಲಿ ನಮ್ಮ ಸಮಾನರು ಯಾರೂ ಇಲ್ಲವೆಂದು ಹೇಳುವಂತಿತ್ತು. ರಾಮಗುಲಾಮ ಸೌತೆಕಾಯಿಗಳನ್ನು ತೂಗಿ, ಕಾಯಿಗಳಿದ್ದ ಪರಡಿಯನ್ನು ಸಾಕಷ್ಟು ಕೆಳಗೆ ಮಾಡಿ, ಬಿಲ್ಲೇಸುರರ ಅಂಗವಸ್ತ್ರದಲ್ಲಿ ಕಾಯಿಗಳನ್ನು ಸುರಿದ. ಬಿಲ್ಲೇಸುರರು ಅಂಗವಸ್ತ್ರಕ್ಕೆ ಒಂದು ಗಂಟು ಬಿಗಿದು, ಬಳಿಕ ಸಂಚಿಯಿಂದ ಒಂದು ದುಡ್ಡು ತೆಗೆದು ಕೈಚಾಚಿ ನಿಂತಿದ್ದ ರಾಮಗುಲಾಮನ ಕೈಯಲ್ಲಿಟ್ಟರು. ''ಇನ್ನೊಂದು ದುಡ್ಡು ಕೊಡು'' ಎಂದು ಆತನೆಂದಾಗ ಬಿಲ್ಲೇಸುರರು ಮುಗುಳ್ನಕ್ಕು, ''ಏನು, ಊರವರಿಂದಲೂ ಪೇಟೆಯ ಧಾರಣೆ ಕೇಳುತ್ತೀಯಾ?'' ಅಂದರು. ರಾಮಗುಲಾಮನೆಂದ, ''ನೀನೇನು ದಿನಾ ಬರುವ ಗಿರಾಕಿಯೇ? ಇವತ್ತೇನೋ ಮನಸ್ಸು ತಿರುಗಿದೆ, ಅಥವಾ ಯಾರಾದರೂ ನೆಂಟರು ಬಂದಿರಬೇಕು.'' ಬಿಲ್ಲೇಸುರರೆಂದರು, ''ಸರಿ ಹಾಗಿದ್ದರೆ, ನಾಳೆ ಕೊಡುವೆ. ಈಗ ಹಣವಿಲ್ಲ.'' ಬಿಲ್ಲೇಸುರರಿಗೆ ಪಲ್ಯೆ ತಿನ್ನಬೇಕೆನಿಸಿದಾಗ ಕಡಲೆಕಾಳನ್ನು ನೆನೆಸಿ, ಎಣ್ಣೆ-ಮಸಾಲೆಯಲ್ಲಿ ಕರಿದು ರಸಪಲ್ಯೆ ಮಾಡಿಕೊಳ್ಳುತ್ತಿದ್ದರು. ತಿರುಗಿ ಬರುತ್ತ ದಾರಿಯಲ್ಲಿ ಮುರಲಿ ಕಹಾರ (ಡೋಲಿ ಎತ್ತುವವ)ನಿಗೆ, ''ನಾಳೆ ನನಗೆ ಎರಡು ಸೇರು ಸಿಂಘಾಡೆ (ನೀರುಗೆಣಸು) ತಂದುಕೊಡು'' ಎಂದು ಹೇಳಿದರು. ಮನೆಗೆ ಬಂದು ಕೂಗಿ ಕರೆದು ಬಾಗಿಲು ತೆರೆಯಿಸಿದರು. ದೀಪ ಉರಿಸಿ ಆಡುಗಳ ಹಾಲು ಕರೆದರು. ಬೆಳಿಗ್ಗೆ ಕೊಯ್ದಿಟ್ಟ

ಎಲೆಗಳನ್ನು ಅವುಗಳೆದುರು ಹಾಕಿದರು. ಅಡಿಗೆ ಮನೆಗೆ ರೊಟ್ಟಿ ಮಾಡಲು ಹೋದರು. ರೊಟ್ಟಿ, ಬೇಳೆ, ಅನ್ನ, ಬದನೆಕಾಯಿ ಪಲ್ಯ, ಮಾವಿನಕಾಯಿ ಉಪ್ಪಿನಕಾಯಿ, ಆಡಿನ ಬಿಸಿ ಹಾಲು ಮತ್ತು ಸಕ್ಕರೆ ಎಲ್ಲವನ್ನೂ ಬಡಿಸಿ, ಮಣೆ ಹಾಕಿ, ಅತ್ತೆಯನ್ನು ಕರೆದರು, "ಅಮ್ಮಾ, ಬಾ ಊಟ ಮಾಡು" ಮನ್ನಿಯ ಅತ್ತೆ ನಾಚಿಕೊಂಡೇ ಎದ್ದು ಕೈಕಾಲು ತೊಳೆದು ಕೂತು ಬಹಳ ಪ್ರೀತಿಯಿಂದ ಉಣ್ಣತೊಡಗಿದಳು. ತಿನ್ನುತ್ತಲೇ ಕೇಳಿದರು, "ನಿನ್ನ ಬಳಿ ಎಮ್ಮೆಯಂತೂ ಇಲ್ಲ. ಆದರೆ ಈ ತುಪ್ಪ ಎಮ್ಮೆಯದಿದ್ದ ಹಾಗೆ ಕಾಣುತ್ತದಲ್ಲ." ಬಿಲ್ಲೇಸುರರೆಂದರು, "ಮನೆ ಅಂದ ಮೇಲೆ ಎಮ್ಮೆಯ ತುಪ್ಪ ಇರಲೇಬೇಕಲ್ಲ. ಬರುವವರು, ಹೋಗುವವರು ಇರುತ್ತಾರೆ, ನನ್ನದೇನೋ ಆಡಿನ ತುಪ್ಪದಿಂದ ಕೆಲಸ ಸಾಗುತ್ತದೆ." ಮನ್ನಿಯ ಅತ್ತೆ ಪಟ್ಟಾಗಿ ಊಟ ಮಾಡಿ ಕೈ-ಬಾಯಿ ತೊಳೆದು ಹೊರಸಿನ ಮೇಲೆ ಕೂತಳು. ಬಿಲ್ಲೇಸುರರು ಮಸಾಲೆ ಡಬ್ಬಿಯಿಂದ ಏಲಕ್ಕಿ ತೆಗೆದುಕೊಟ್ಟರು. ನಂತರ ತಾವೂ ಊಟಕ್ಕೆ ಕೂತರು. ಬಹಳ ದಿನಗಳ ನಂತರ ತೃಪ್ತಿಯಿಂದ ಉಂಡರು. ನೆರೆಮನೆಯಿಂದ ಒಂದು ಮಂಚ ಕೇಳಿ ತಂದರು. ಅದರ ಮೇಲೆ ತಮಗಾಗಿ ಜಮಖಾನೆ ಹಾಸಿಕೊಂಡರು. ಮನ್ನಿಯ ಅತ್ತೆಗಾಗಿ ಬಂಗಾಳದಿಂದ ತಂದಿದ್ದ ಬಣ್ಣ ಬಣ್ಣದ ದುಪ್ಪಟಿ ಹಾಸಿದರು. ಅಲ್ಲಿದ್ದಾಗ ಗುರುಪತ್ನಿಯ ಹಳೇ ಸೀರೆಗಳಿಂದ ಹೊಲಿದಿದ್ದ ತಲೆದಿಂಬು ಇಟ್ಟರು. ಅತ್ತೆ ಮಲಗಿದಳು. ಕಣ್ಣು ಮುಚ್ಚಿ ಹಾಗೇ ಬಿಲ್ಲೇಸುರರ ಆಡುಗಳ ಬಗ್ಗೆ ಯೋಚಿಸತೊಡಗಿದಳು. ಬಿಲ್ಲೇಸುರರು ಹೊರಗೆ ಹೋದಾಗ ಆಕೆ ಪ್ರತಿಯೊಂದು ಆಡನ್ನೂ ಚೆನ್ನಾಗಿ ಪರೀಕ್ಷಿಸಿ ನೋಡಿದ್ದಳು. ಎಣಿಸಿ ಆಶ್ಚರ್ಯಗೊಂಡಿದ್ದಳು. "ಇಷ್ಟು ಆಡುಗಳು ಹಾಗೂ ಮರಿಗಳನ್ನು ಸಾಕುವುದೆಂದರೆ ಮೂರು ಎಮ್ಮೆಗಳನ್ನು ಸಾಕಿದಷ್ಟು, ತುಸು ಹೆಚ್ಚೇ, ಲಾಭ ಬರುವುದು."

ಬಿಲ್ಲೇಸುರರು ಧೈರ್ಯದ ಪ್ರತೀಕವಾಗಿದ್ದರು. ಮನಸ್ಸಿನಲ್ಲಿ ಎಷ್ಟೇ ಆಸೆಯಿದ್ದರೂ ಬಹಿರಂಗವಾಗಿ ಮದುವೆಯ ಬಗ್ಗೆ ತಾವಾಗಿ ಏನೂ ಮಾತಾಡಲಿಲ್ಲ. ಇವತ್ತು ದಣಿದಿದ್ದಾಳೆ, ವಿಶ್ರಾಂತಿ ಪಡೆಯಲಿ, ನಾಳೆ ತಾನಾಗಿ ಮಾತು ತೆಗೆದಾಳು, ಇಲ್ಲದಿದ್ದರೆ ಇಲ್ಲೇನು ಬರಿ ಮುಖ ತೋರಿಸಿ ಹೋಗಲು ಬಂದಿದ್ದಾಳೆಯೇ? ಅಂದುಕೊಂಡರು.

ಬಿಲ್ಲೇಸುರರು ಮಲಗಿದ್ದರು. ಒಮ್ಮೆಲೆ ಹೊರಗಿನಿಂದ ಬಿಕ್ಕಳಿಸುವ ದನಿ ಕೇಳಿ ಬಂದಿತು. ಉಸಿರು ಬಿಗಿಹಿಡಿದು ಕೇಳಿದರು. ಬಳಿಕ ಅಳುವ ದನಿ ಸ್ಪಷ್ಟವಾಗಿ ಕೇಳಿಸಿತು. ತಿಂದು ಕುಡಿದು ಎಲ್ಲಾ ಮುಗಿದ ಬಳಿಕ ಏನು ಕಾರಣ ಈ ರೀತಿ ಅಳಲಿಕ್ಕೆ? ಮದುವೆಯ ಸಂಬಂಧವೇನಾದರೂ ಕೂಡಿ ಬರಲಿಲ್ಲವೇ, ಈ ಅಳು ಅದರದೇ ಮುನ್ಸೂಚನೆಯೇ, ಅಂತ ಬಿಲ್ಲೇಸುರರ ಎದೆ ಧಸ್ಸೆಂದಿತು. ಗಾಬರಿಯಿಂದ "ಯಾಕಮ್ಮ, ಯಾಕಳುತ್ತಿದ್ದೀ?" ಎಂದು ಕೇಳಿದರು. ಮನ್ನಿಯ ಅತ್ತೆ ಅಳುತ್ತಲೇ ಮಾತಾಡಿದಳು, "ನನ್ನ ಮಗಳನ್ನು ಮಾವ ಕಾಣದ ದೇಶಕ್ಕೆ ಕರಕೊಂಡು ಹೋದ, ಹೋದಾಗಿನಿಂದ ಒಂದು ಪತ್ರ ಸಹ ಬರೆದಿಲ್ಲ."

ಬಿಲ್ಲೇಸುರರು ತಿಳಿಹೇಳಿದಳು, "ಅಳಬೇಡಮ್ಮಾ, ಅತ್ತಿಗೆ ಸುಖವಾಗಿದ್ದಾಳೆ. ಮನ್ನಿ ಅಣ್ಣಯ್ಯ ಬಹಳೇ ತತ್ಪರತೆಯಿಂದ ಆಕೆಯ ಸೇವೆ ಮಾಡುತ್ತಿದ್ದಾರೆ. ನಾನು ಕೆಲಸಕ್ಕೆಂದು ಹೋಗಿದ್ದೆನಲ್ಲ, ಅಲ್ಲಿಂದ ಬಹಳ ದೂರದಲ್ಲಿ ಅವರು ಇದ್ದಾರೆ. ಅವರ ಸುದ್ದಿ ಯಾವಾಗಲೂ ಬರುತ್ತಿತ್ತು. ಒಳ್ಳೇ ನೌಕರಿ ಸಿಕ್ಕಿದೆಯಂತೆ. ಅತ್ತಿಗೆಯ ಮೇಲೆ ಅವರು ಬಹಳ

ಪ್ರೀತಿಯಂತೆ. ಅತ್ತಿಗೆ ಈಗೇನೂ ಚಿಕ್ಕವಳಲ್ಲ. ಬಿಲ್ಲೇಸುರ, ಇನ್ನು ಮೂರ್‍ನಾಲ್ಕು ವರ್ಷಗಳಲ್ಲಿ ನಿನ್ನ ಅಣ್ಣನಿಗೆ ಮಗ ಹುಟ್ಟುತ್ತಾನೆ-ಅಂತ ಜನ ಅನ್ನುತ್ತಿದ್ದರು.''

''ರಾಮನು ಅವರನ್ನು ಸುಖದಿಂದ ಇಟ್ಟಿರಲಿ. ನನಗಂತೂ ಮೋಸ ಮಾಡಿ ಹೋದ. ಮಗೂ, ನನಗಾದರೂ ಬೇರೆ ಯಾರಿದ್ದರು? ಹೇಗೆ ದಿನಕಳೆದೆನೆಂಬುದು ನನ್ನ ಜೀವಕ್ಕೆ ಗೊತ್ತು.'' ಹಾಗಂದು ಮನ್ನಿಯ ಅತ್ತೆ ದೀರ್ಘವಾಗಿ ಉಸಿರುಬಿಟ್ಟಳು.

ಬಿಲ್ಲೇಸುರರೆಂದರು, ''ಮನ್ನಿ ನಿಮಗೆ ಹೇಗೋ ನಾನೂ ಹಾಗೆಯೇ. ನೀವು ಇಲ್ಲೇ ಇರ್ರಿ. ಮಾಡಿ ಹಾಕುವ ಎರಡು ರೊಟ್ಟಿ ತಿನ್ನುವ ಅವಕಾಶ ಸಿಗುತ್ತದೆ.''

ಮನ್ನಿಯ ಅತ್ತೆ ಬಹಳ ಪ್ರಸನ್ನಳಾದಳು. ''ಮಗೂ, ನೂರುಕಾಲ ಬಾಳಿ ಬದುಕು. ನಿನ್ನದೊಂದೇ ಆಸರೆ ಈಗ ನನಗುಳಿದಿದ್ದು. ಹೇಗೂ ಬಂದಿದ್ದೇನಲ್ಲ, ಸ್ವಲ್ಪ ದಿನ ಇದ್ದು ಹೋಗುವೆ. ಇಲ್ಲಿಯ ನಿನ್ನ ಕೆಲಸವನ್ನೂ ನೋಡಿದ ಹಾಗಾಯಿತು. ಒಂದು ಸಂಬಂಧವನ್ನೂ ನೋಡಿರುವೆ, ಮದುವೆಯಾದರೆ ಆಕೆಗೆ ನಿನ್ನ ಮನೆ ಕೆಲಸವನ್ನೆಲ್ಲ ಕಲಿಸಿಬಿಟ್ಟೇ ಹೋಗುವೆ.''

''ಇದಕ್ಕಿಂತ ಒಳ್ಳೆಯದು ಇನ್ನೇನಿದ್ದೀತು!'' ಬಿಲ್ಲೇಸುರರ ಗಂಡಸುತನ ಜಾಗೃತವಾಗಿ ಹೇಳಿದರು.

ಮನ್ನಿಯ ಅತ್ತೆಯೆಂದಳು, ''ಮಗೂ, ನಿನಗೆ ಹೇಳಿರಲಿಲ್ಲ. ಕೆಲಸದಿಂದ ನಿನಗೆ ತುಸು ಪುರಸೊತ್ತಾದಾಗ ಹೇಳೋಣ ಅಂದುಕೊಂಡಿದ್ದೆ. ಒಂದು ಒಳ್ಳೇ ಸಂಬಂಧವಿದೆ. ಹುಡುಗಿ ನಿನಗೆ ಯೋಗ್ಯಳಾಗಿ ಜಾಣೆಯಿದ್ದಾಳೆ. ಆದರೆ ನನ್ನ ಮಗಳ ಹಾಗೆ ಬೆಳ್ಳಗಿಲ್ಲ. ಒಳ್ಳೇ ಜನರು. ಮನೆಗೆಲಸ ಸಂಭಾಳಿಸುತ್ತಾಳೆ. ನಿನಗೆ ಒಪ್ಪಿಗೆಯೇ?''

ಬಿಲ್ಲೇಸುರರು ವಿನಮ್ರರಾಗಿ ಅಂದರು, ''ಅದೆಲ್ಲ ನಿಮಗೆ ಸೇರಿದ್ದು. ನಿಮಗೆ ಒಪ್ಪಿಗೆಯಾಗಿದ್ದರೆ ನನಗೂ ಒಪ್ಪಿಗೆ.''

ಮನ್ನಿಯ ಅತ್ತೆ ಪ್ರಸನ್ನಳಾಗಿ ಹೇಳಿದಳು, ''ಸರಿ, ಹಾಗಿದ್ದರೆ ಒಪ್ಪಿಬಿಡು. ಆಕೆಯೂ ನಿನ್ನ ಕೂಡ ಕಷ್ಟವಿಲ್ಲದೆ ಸುಖವಾಗಿರುತ್ತಾಳೆ. ಆಕೆಯ ತಾಯಿಗೆ ಮಾತ್ರ ನೀನು ಸ್ವಲ್ಪ ಸಹಾಯ ಮಾಡಬೇಕಾಗುತ್ತದೆ. ಮದುವೆಗಿಂತ ಮೊದಲೇ, ಬಹಳೇನಿಲ್ಲ, ಮೂವತ್ತು ರೂಪಾಯಿ ಮಾತ್ರ ಕೊಡು. ಬಡವಿ, ಸಾಲ ಬೇರೆ ಮಾಡಿದ್ದಾಳೆ.'' ಆಮೇಲೆ ಅಷ್ಟಿಷ್ಟು ಕೊಡುತ್ತಿರು. ಆಕೆಗೂ ಬೇರೆ ಯಾರೂ ಇಲ್ಲ. ನಾನು ಹುಡುಗಿಯನ್ನು ನಿನ್ನ ಕಡೆ ಕರಕೊಂಡು ಬರುವೆ. ಇಲ್ಲೇ ಮದುವೆಯಾಗಲಿ. ಆ ಕಡೆ ದಿಬ್ಬಣ ತಗೊಂಡು ಹೋದರೆ ಪೂರಾ ಖರ್ಚು ಕೊಡಬೇಕಾಗುವುದು, ಬಹಳಷ್ಟಾದೀತು. ಮನೆಯಲ್ಲೇ ನಿನ್ನ ನಾಲ್ಕು ಜನ ಬಾಂಧವರನ್ನು ಕರೆಸಿ ಮದುವೆ ಮಾಡಿಕೊಂಡುಬಿಡು, ಅಂದರೆ ಸುಲಭವಾಗಿ ದಾಟಿಬಿಡುತ್ತೀ.''

ಈ ಮಾತಿನಲ್ಲಿ ಮೋಸವಿಲ್ಲೆಂದು ಬಿಲ್ಲೇಸುರರಿಗೆ ಮನವರಿಕೆಯಾಗಿ ಅವರೆಂದರು, ''ಸರಿ, ಬಹಳ ಒಳ್ಳೇ ಸಲಹೆ ಮಾಡಿದಿರಿ.''

ಮನ್ನಿಯ ಅತ್ತೆ ಮತ್ತೆ ಕೆಲವು ದಿನ ಇದ್ದಳು. ಬಿಲ್ಲೇಸುರರಿಗೆ ರುಚಿಯಾಗಿ ಅಡಿಗೆ ಮಾಡಿ ಬಡಿಸಿದಳು. ಮೂರು, ನಾಲ್ಕು ದಿನಗಳಲ್ಲಿ ಬಣ್ಣವೇ ಬದಲಾಯಿತು. ಲಗ್ನವಾಗುವವರೆಗೂ ಆಕೆ ಅಲ್ಲೇ ಇರಬೇಕೆಂದು ಅವರು ಒತ್ತಾಯಿಸಿದರು. ಆಕೆ ಒಪ್ಪಿಕೊಂಡಳು.

ಊರಲ್ಲಿ ಬಿಲ್ಲೇಸುರರ ಬಗ್ಗೆ ಬಿಸಿಬಿಸಿ ಚರ್ಚೆಯಾಯಿತು. ಒಂದು ದಿನ ತ್ರಿಲೋಚನರು ಮನ್ನಿಯ ಅತ್ತೆಯನ್ನು ನಿಲ್ಲಿಸಿ ಕೇಳಿದರು, "ಮದುವೆ ಯಾರೊಂದಿಗೆ ಮಾಡಬೇಕೆನ್ನುತ್ತೀ ಹೇಳು."

"ನನ್ನ ಸಂಬಂಧಿಕರೊಂದಿಗೆ" ಆಕೆ ಹೇಳಿದಳು.

"ಹುಡುಗಿ ಎಲ್ಲಿಯವಳು?"

"ಯಾಕೆ, ನೀನೇ ಬಿಲ್ಲೇಸುರನೇನು?" ಮನ್ನಿಯ ಅತ್ತೆ ಕಣ್ಣು ಕುಣಿಸಿ ಅಂದಳು, "ಮಗನೇ, ನನ್ನ ಕಣ್ಣು ನಿಚ್ಚಳವಾಗಿವೆ. ನನಗೇನೂ ಪೊರೆ ಬಂದಿಲ್ಲ. ಈಗ ಹೇಳು, ನಿನಗೂ ಬಿಲ್ಲೇಸುರರಿಗೂ ಏನು ಸಂಬಂಧ?"

ಬಾಣ ನಾಟಲಿಲ್ಲ. ತ್ರಿಲೋಚನರಿಗೆ ಸಿಟ್ಟು ಬಂದಿತು. ಅವರೆಂದರು, "ಸರಿ, ಮದುವೆಯಾದ ಮೇಲೆ ಅವರ ಕೂಡ ಜಾತಿಬಾಂಧವರು ಸಂಬಂಧ ಕಡಿದುಕೊಂಡು ಬಹಿಷ್ಕಾರ ಹಾಕುವರಲ್ಲ, ಆಗ ಎಲ್ಲಿಯವರು ಅಂತ ಹೇಳುವಿಯಂತೆ."

"ಯಾರ ಕೂಡ ಬಂಧು ಬಳಗದವರು ಇರುತ್ತಾರೋ ಅವರಿಗೆ ದೇವರೂ ಬಹಿಷ್ಕಾರ ಹಾಕಲಾರ, ನೀನಂತೂ ನಮ್ಮ ಮನೆಯಿಂದ ಹೊರಗೆ ನಡೆ, ಊರಲ್ಲಿ ಮತ್ತಾರಿಗೆ ಬಹಿಷ್ಕಾರ ಹಾಕುವಿಯೋ ನೋಡು ಹೋಗು." ತ್ರಿಲೋಚನರು ಅವಮಾನದಿಂದ ಮುಖ ಊದಿಸಿಕೊಂಡು ಹೊರ ನಡೆದರು.

ದಿನಗಳು ನಿಶ್ಚಿಂತೆಯಿಂದ ಕಳೆದು ಹೋಗುತ್ತಿದ್ದವು. ಬಿಲ್ಲೇಸುರರ ಗೆಣಸು ಚೆನ್ನಾಗಿ ಬೆಳೆದಿತ್ತು. ಅದೆಷ್ಟೋ ಸಲ ಅವರು ಮನ್ನಿಯ ಅತ್ತೆಗೆ ಗೆಣಸು ಬೇಯಿಸಿ ಆಡಿನ ಹಾಲಿನೊಂದಿಗೆ ಉಣಬಡಿಸಿದರು. ಮನ್ನಿಯ ಅತ್ತೆ ಮನ್ನಿಯ ಬಗ್ಗೆ ಎಷ್ಟು ಅಸಂತುಷ್ಟಳಿದ್ದಳೋ ಬಿಲ್ಲೇಸುರರ ಬಗ್ಗೆ ಅಷ್ಟೇ ಸಂತುಷ್ಟಳಾದಳು. ಆಕೆ ಬಿಲ್ಲೇಸುರರ ತೋಟದ ಒಂದೊಂದು ಗಿಡವನ್ನೂ ಗೆಣಸಿನ ಹೊಲದ ಒಂದೊಂದು ಬಳ್ಳಿಯನ್ನೂ ನೋಡಿದಳು. ಆಕೆ ಬಂದಾಗಿನಿಂದ ರಾತ್ರಿಯ ಹೊತ್ತು ಹೊಲ ಕಾಯಲೆಂದು ಬಿಲ್ಲೇಸುರರು ಹೊಲದಲ್ಲೇ ಇರತೊಡಗಿದರು. ಒಂದೆರಡು ಕಾಡು ಹಂದಿಗಳು ಬಂದು ಒಂದಿಷ್ಟು ಗಡ್ಡೆಗಳನ್ನು ತಿಂದು ಹೋದವು. ಇನ್ನೂ ಗೆಣಸು ಹಳದಿಗೆ ತಿರುಗಿರಲಿಲ್ಲ. ಹಾಗೇ ಬಿಟ್ಟರೆ ಲುಕ್ಸಾನಾಗಬಹುದೆಂದು ಅಂದಾಜು ಹಾಕಿದ ಮನ್ನಿಯ ಅತ್ತೆ ಎಲ್ಲಾ ಗೆಣಸುಗಳನ್ನು ಕಿತ್ತುಕೊಂಡು ಬರಬೇಕೆಂದು ಸಲಹೆಯಿತ್ತಳು. ಬಿಲ್ಲೇಸುರರು ಹಾಗೇ ಮಾಡಿದರು. ಅವನ್ನು ತಂದು ಮನೆಯಲ್ಲಿ ಒಟ್ಟಿದರು. ಇಡೀ ಮನೆ ಗೆಣಸುಗಳಿಂದ ತುಂಬಿಹೋಯಿತು. ಒಂದೊಂದು ಗೆಣಸನ್ನೂ ಆಯ್ದು ಇಡುವಾಗ ಮನ್ನಿಯ ಅತ್ತೆ ನಕ್ಕು ಹೇಳಿದಳು, "ಇಷ್ಟರಲ್ಲಿ ನಿನ್ನ ಮದುವೆಯೂ ಆಗಿ ಮೇಲೆ ಸಾಕಷ್ಟು ಗೆಣಸು ತಿನ್ನಲು ಉಳಿಯುವುದು." ಗೆಣಸುಗಳನ್ನು ಭರವಸೆಯಿಂದ ನೋಡುತ್ತ ಬಿಲ್ಲೇಸುರರೆಂದರು, "ಅಮ್ಮಾ, ಎಲ್ಲಾ ನಿನ್ನದೇ ಆಶೀರ್ವಾದ ಇಲ್ಲದಿದ್ದರೆ ನನ್ನ ಯೋಗ್ಯತೆಯೇನು?"

ಅತ್ತೆ ನಿಟ್ಟುಸಿರು ಬಿಟ್ಟು ಅಂದಳು, "ನನ್ನ ಮಗನೂ ಬದುಕಿ ಉಳಿದಿದ್ದರೆ ಇಷ್ಟೊತ್ತಿಗೆ ನಿನ್ನಷ್ಟೇ ದೊಡ್ಡವನನಾಗಿರುತ್ತಿದ್ದ. ಹೊಲ-ಮನೆ ಕೆಲಸ ನೋಡಿಕೊಳ್ಳುತ್ತಿದ್ದ, ನಾನು ಹೀಗೆ ಪಿರಿಪಿರಿ ತಿರುಗಬೇಕಾಗುತ್ತಿರಲಿಲ್ಲ." ಬಿಲ್ಲೇಸುರರು ಆಕೆಗೆ ಸಾಂತ್ವನ ಹೇಳಿದರು, "ನಾನೂ ನಿನ್ನ ಮಗನೇ. ನೀನು ಏನೂ ಚಿಂತೆ ಮಾಡಬೇಡ. ನನ್ನ ಜೀವವಿರುವವರೆಗೂ ನಿನ್ನ ಸೇವೆ

ಮಾಡುವೆ. ಮನಸ್ಸು ಚಿಕ್ಕದು ಮಾಡಿಕೊಳ್ಳಬೇಡ.'' ಅತ್ತೆ ಸೆರಗಿಂದ ಕಣ್ಣೊರೆಸಿಕೊಂಡಳು. ಬಿಲ್ಲೇಸುರರು ಗೆಣಸುಗಳನ್ನು ಖರೀದಿಗೆ ಹಚ್ಚಲು ಬೇರೆ ಊರಿಗೆ ನಡೆದರು. ತಿರುಗಿ ಬಂದು ಆಡುಗಳಿಗಾಗಿ ಎಲೆ ಕೊಯ್ಯಬೇಕೆಂದು ಯೋಚಿಸಿದರು. ಎರಡನೇ ದಿನ ಖರೀದಿದಾರ ಬಂದ, ಬಿಲ್ಲೇಸುರರು ತಮ್ಮ ಗೆಣಸುಗಳನ್ನು ಎಪ್ಪತ್ತು ರೂಪಾಯಿಗೆ ಮಾರಾಟ ಮಾಡಿದರು. ಇಡೀ ಊರಲ್ಲಿ ದೊಡ್ಡ ಸುದ್ದಿಯಾಯಿತು. ಜನರಿಗೆಲ್ಲ ಹೊಟ್ಟೆಕಿಚ್ಚಾಯಿತು. ಮರುವರ್ಷ ತಾವೂ ಗೆಣಸು ಹಚ್ಚಬೇಕೆಂದು ಎಲ್ಲರೂ ನಿರ್ಧರಿಸಿದರು.

## ಹದಿನೈದು

ಕಾರ್ತಿಕದ ಬೆಳಂದಿಂಗಳು ಎಲ್ಲೆಡೆ ಹರಡಿತ್ತು. ನವಿರಾದ ಚಳಿಗಾಳಿ ಬೀಸುತ್ತಿತ್ತು. ಸವನ ಜಾತಿಯ ಹಕ್ಕಿಗಳು ಎಲ್ಲಿಂದಲೋ ಹಾರಿಬಂದು ಚಳಿಗಾಲಕ್ಕಾಗಿ ಹುಣಿಸೆಮರದ ಪೊಟರೆಯಲ್ಲಿ ಗೂಡು ಕಟ್ಟತೊಡಗಿದ್ದವು; ಅವುಗಳ ಕಲರವ ಸುತ್ತೆಲ್ಲ ನಿನದಿಸುತ್ತಿತ್ತು. ಬಿಲ್ಲೇಸುರರು ರಾತ್ರಿ ಎತ್ತರದ ಗೋಪುರದ ಮೇಲೆ ಕೂತು ನೋಡುತ್ತಿದ್ದರು, ಮೊದಲು ಆಕಾಶದಲ್ಲಿ ಯಾವ ಜಾಗದಲ್ಲಿ ಹರಿಣ-ಹರಿಣಿಗಳು ಕಾಣುತ್ತಿದ್ದವೋ ಈಗ ಅವು ಅಲ್ಲಿ ಕಾಣುತ್ತಿರಲಿಲ್ಲ. ಅವರೆನ್ನುತ್ತಿದ್ದರು, ಎಲ್ಲಿ ಮೇಯಲು ಹುಲ್ಲು ಸಿಗುತ್ತದೋ ಅವು ಅಲ್ಲಿಗೆ ಹೋಗುತ್ತವೆ. ಸಂಜೆ ಮಂಜು ಬೀಳತೊಡಗಿತ್ತು, ಆದ್ದರಿಂದ ಬಹಳ ಹೊತ್ತಿನ ತನಕ ಹೊರಗೆ ಕೂಡುವುದು ಆಗುತ್ತಿರಲಿಲ್ಲ. ಜನರೆಲ್ಲ ಬೇಗನೆ ಊಟ ಮುಗಿಸಿ ಮಲಗಿಬಿಡುತ್ತಿದ್ದರು. ಬಿಲ್ಲೇಸುರರು ಮನೆಗೆ ಬಂದರು. ಮನ್ನಿಯ ಅತ್ತೆ ಎಂದಿನಂತೆ ರೊಟ್ಟಿ ಮಾಡಿ ಇಟ್ಟಿದ್ದಳು. ಕೆಲ ದಿನಗಳಿಂದ ಅತ್ತೆಯ ಕೈಯ ರೊಟ್ಟಿ ತಿಂದು ಬಿಲ್ಲೇಸುರರು ನೋಡಲು ಚೆನ್ನಾಗಿ ಕಾಣುತ್ತಿದ್ದರು. ಕಾಲು ತೊಳೆದು ಊಟದ ಮನೆಗೆ ಬಂದರು. ಅತ್ತೆ, ತಟ್ಟೆಯನ್ನು ಮುಂದಿರಿಸಿದಳು. ಅತ್ತೆಯ ಎದುರು ತೋರಿಸಿಕೊಳ್ಳಲೆಂದು ಬಿಲ್ಲೇಸುರರು ಊಟಕ್ಕೆ ಮೊದಲು ಒಂದಿಷ್ಟು ಅನ್ನವನ್ನು ಅಗ್ರಾಸನವೆಂದು (ದೇವತೆಗಳಿಗೆ-ಗೋವುಗಳಿಗೆ ಅರ್ಪಿಸಲು ಮೀಸಲಿಡುವ ಅನ್ನ) ತೆಗೆದಿಡುತ್ತಿದ್ದರು. ಊಟ ಮಾಡಿ ಏಳುವಾಗ ಅದನ್ನು ತೆಗೆದುಕೊಂಡೇ ಎದ್ದು ಒತ್ತಟ್ಟಿಗೆ ಇಟ್ಟು, ಕೈಬಾಯಿ ತೊಳೆದು ಆಡಿನ ಮರಿಗಳಿಗೆ ಅದನ್ನು ತಿನ್ನಿಸುತ್ತಿದ್ದರು. ಅಗ್ರಾಸನ ತೆಗೆದಿಡುವ ಮೊದಲು ಲೋಟದಿಂದ ನೀರು ಬಗ್ಗಿಸಿ ತಟ್ಟೆಯ ಸುತ್ತಲೂ ಮೂರು ಸಲ ಪರಿಷಿಂಚನ ಮಾಡಿ ಆಪೋಶನ ತೆಗೆದುಕೊಳ್ಳುತ್ತಿದ್ದರು. ಅಗ್ರಾಸನ ತೆಗೆದಿಟ್ಟು ಗಂಟೆಯ ಹಾಗೆ ಲೋಟವನ್ನು ಬಾರಿಸಿ ಕಣ್ಣುಮುಚ್ಚಿಕೊಳ್ಳುತ್ತಿದ್ದರು. ಆ ಕಾರ್ಯವನ್ನೂ ಇವತ್ತೂ ಮಾಡಿದರು.

ಅವರು ಉಣ್ಣತೊಡಗಿದಾಗ ಅತ್ತೆ ಬಹಳ ದೈನ್ಯ ಭಾವದಿಂದ ವಿನಂತಿಸುವ ಹಾಗೆ ಅಂದಳು, ''ಇನ್ನು ಚಳಿಗಾಲ ಬಂದಿತು, ಮಗೂ, ನಿನ್ನ ಒಪ್ಪಿಗೆಯಿದ್ದರೆ ನಾನು ಹೊರಡುವೆ.'' ಬಳಿಕ ಒಮ್ಮೆ ಕೆಮ್ಮಿ, ''ಆ ಕೆಲಸವೂ ನನ್ನದೇ ತಾನೆ?'' ಅಂದಳು.

ಬಾಯಲ್ಲಿನ ತುತ್ತನ್ನು ನುಂಗಿ ಗಂಭೀರರಾಗುತ್ತ ದಪ್ಪ ದನಿಯಲ್ಲಿ ಬಿಲ್ಲೇಸುರರೆಂದರು ''ಹೌದು, ಆ ಕೆಲಸವನ್ನೊಂದು ಮಾಡಬೇಕಲ್ಲ.''

“ಅದೇ ಹೇಳುತ್ತಿದ್ದೆ” ತುಸು ಮುಂದೆ ಸರಿದು ಕೂತು ಅತ್ತೆ ಹೇಳಿದಳು, “ಒಂದಿಷ್ಟು ಹಣ ಈಗಲೇ ಕೊಡು, ಉಳಿದದ್ದು ಆಮೇಲೆ, ಮದುವೆಗೆ ಎರಡು-ಮೂರು ದಿನ ಮೊದಲು ಕೊಡುವೆಯಂತೆ.”

ಹಣದ ಹೆಸರು ಕೇಳಿದೊಡನೆ ಬಿಲ್ಲೇಸುರರಿಗೆ ಇರಿಸುಮುರಿಸಾಯಿತು. ಆದರೆ ಹಣವಿಲ್ಲದೆ ಮದುವೆಯಾಗಲಾರದಲ್ಲ, ಅಷ್ಟು ಹಣ ಹೋದರೆ ಹೋಗಲಿ ಅಂದುಕೊಂಡು ಮದುವೆಯನ್ನು ಪಕ್ಕಾ ಮಾಡುವ ಬಗ್ಗೆ ಯೋಚಿಸತೊಡಗಿದರು. “ಅಮ್ಮಾ, ಇನ್ನೂ ಯಾವ ಜ್ಯೋತಿಷಿಗಳನ್ನೂ ಕೇಳಿಲ್ಲವಲ್ಲ, ಕೂಡಿ ಬರದಿದ್ದರೆ?”

“ಅದೆಲ್ಲ ಹುಡುಗಾಟದ ಮಾತು” ಪೂರಾ ಭರವಸೆಯಿಂದ ತಲೆಯೆತ್ತಿ ಮನ್ನಿಯ ಅತ್ತೆ ಅಂದಳು, “ಕನ್ಯೆಯಲ್ಲಿ ಏನೂ ದೋಷವಿಲ್ಲವೆಂದ ಬಳಿಕ ಮದುವೆ ಕೂಡಿ ಬರುವುದಿಲ್ಲ ಹೇಗೆ? ಮಗೂ, ಹುಡುಗಿ ಆಕಳಿನಂಥವಳು. ಇಲ್ಲಿಯವರೆಗೆ ಮದುವೆ ಏಕಾಗಿಲ್ಲ ಅನ್ನುವಿಯಾ? ರಾಮ ಖೇಲಾವನರು ಪರದೇಶದಿಂದ ಬಂದರು. ನಿಂತ ಕಾಲ ಮೇಲೆ ಲಗ್ನವಾಗಿ ತಿರುಗಿ ಹೋಗುವವರಿದ್ದರು. ಕೈ ಮುಗಿದು ಕೇಳಿಕೊಂಡರು-ದೊಡ್ಡಮ್ಮಾ, ಹೇಗಾದರೂ ಮಾಡಿ ಲಗ್ನ ಮಾಡಿಸು, ನೀನು ಕೇಳಿದಷ್ಟು ಹಣ ಕೊಡುವೆ-ಅಂತ. ಸರಿ, ಹುಡುಗಿಯ ತಾಯಿಯನ್ನು ಒಪ್ಪಿಸಿ ಜಾತಕ ತೆಗೆದುಕೊಂಡು ಕೇಳಲು ಹೋದಾಗ ತಟ್ಟನೆ ಕೂಡಿ ಬಂದಿತು. ಹುಡುಗಿಯ ತಾಯಿಗೆ ನಗದು ಮೂರು ನೂರು ರೂಪಾಯಿ ಕೊಡುವವರಿದ್ದರು. ಆದರೆ ಶಿಷ್ಟಾಚಾರದ ಮಾತು. ಕನ್ಯೆಯ ತಾಯಿ ಹೇಳಿಬಿಟ್ಟಳು, ನನ್ನ ಮಗಳನ್ನು ಪರದೇಶಕ್ಕೆ ಕರೆದೊಯ್ದುಬಿಡುತ್ತಾರೆ, ತಿರುಗಿ ಈ ಕಡೆ ಹಣಿಕಿ ಸಹ ನೋಡುವುದಿಲ್ಲ; ನನಗೆ ಜಡ್ಡು-ಜಾಪತ್ತು ಬಂದಾಗ ಹನಿ ನೀರಿಗೂ ಪರದಾಡಬೇಕಾದೀತು; ಹಣ ತಗೊಂಡು ನಾನೇನು ಮಾಡಲಿ? ಕೂಡಿ ಬಂದಿದ್ದ ಮದುವೆ ಹೀಗೆ ರದ್ದಾಗಿ ಹೋಯಿತು. ಆಮೇಲೆ ಚುಕಂದರಸುರದ ಜಮೀನ್ದಾರ ರಾಮನೆವಾಜರು ಬಂದರು. ಅವರೊಂದಿಗೂ ಕೂಡಿ ಬಂದಿತು. ಹಣ್ಣು ಉಡಿ ತುಂಬುವ ದಿನ ಬಂದಾಗ ಕನ್ಯೆಯ ತಾಯಿಗೆ ಯಾರೋ ಆ ಊರಿನ ಪಟ್ಟೇದಾರ ರಾಮಾನೆವಾಜರು ತಮ್ಮ ಅಪ್ಪನಿಗೆ ಹುಟ್ಟಿಯೇ ಇಲ್ಲವೆಂದು ಕಿವಿಯೂದಿದ; ಸರಿ, ಮದುವೆ ನಿಂತುಹೋಯಿತು. ಎಷ್ಟು ಸಂಬಂಧಗಳು ಬಂದವು, ಎಲ್ಲಾ ಕೂಡಿ ಬಂದಿದ್ದವು, ಆದರೆ ಮದುವೆ ಮಾತ್ರ ಆಗಲಿಲ್ಲ.”

ಕನ್ಯೆಯಲ್ಲಿ ಏನೂ ಐಬು ಇಲ್ಲವೆಂದು ಈಗ ಬಿಲ್ಲೇಸುರರಿಗೆ ಖಾತ್ರಿಯಾಯಿತು. ಅವರು ಖುಶಿಯಿಂದ ಉಸಿರುಗರೆದರು. ಮನ್ನಿಯ ಅತ್ತೆಯ ಭಾವಾವೇಶ ಇನ್ನೂ ಇಳಿದಿರಲಿಲ್ಲ, ಬಂಗಾಳಿ ಹೆಂಗಸಿನ ಹಾಗೆ ಚುರುಕಾಗಿ ಅಂದಳು, “ಈಗ ನೀನು ನಮ್ಮವ ಅಂತ ಒಂದು ಮಾತು ಹೇಳುವೆ. ಹೀಗೆ ನೂರಾರು ಖರೆ-ಸುಳ್ಳು ಸಂಗತಿಗಳು ಆಗಿರದಿದ್ದರೆ ಆ ರಂಡೆ ನಿನ್ನ ಸಂಬಂಧವನ್ನು ಒಪ್ಪುತ್ತಿರಲೇ ಇಲ್ಲ.”

ಅಸಮಾಧಾನದಿಂದ ಬಿಲ್ಲೇಸುರರೆಂದರು “ಮತ್ತೆ ಬಹಳ ಒಳ್ಳೇ ಜನ ಅಂತ ನೀನೇ ಅನ್ನುತ್ತಿದ್ದೆಯಲ್ಲ?”

“ಮಗೂ, ಬಾಯಿಯಿಂದ ಹೇಳುವಾಗ ಎಲ್ಲರಿಗೂ ಒಳ್ಳೇ ಜನ ಅನ್ನುತ್ತೇವೆ; ಆದರೆ ಎಂತಹ ಒಳ್ಳೇ ಜನವೇ ಇರಲಿ, ತನ್ನ ಚಿತ್ತಾದ ನಾಣ್ಯ ಪಟ್ ಆಗುವುದನ್ನು ಸಹಿಸಿಯಾನೆ?

ಮತ್ತೆ ಆ ಮೂರು ಕಾಸಿನ ಹೆಂಗಸು ತನ್ನ ಮಗಳನ್ನು ನಿನಗೆ ಕೊಡಲು ಹೇಗೆ ಒಪ್ಪುತ್ತಾಳೆ? ಆಕೆಗೆ ತಿಳಿಸಿ ಹೇಳಿದೆ-ದುರ್ಗಾದಾಸರ ಸತ್ಕುಲದ ಹುಡುಗ, ಪರದೇಶಕ್ಕೆ ಹೋಗಿ ದುಡ್ಡು ಮಾಡಿಕೊಂಡು ಬಂದಿದ್ದಾನೆ, ಒಂದೇ ಸಲ ಎಲ್ಲ ಎಣಿಸಿಕೊಡು ಅಂದರೆ ಸಾಧ್ಯವಿಲ್ಲ, ನಿಧಾನವಾಗಿ ಕೊಡುತ್ತಾನೆ. ಕೊನೆಗೆ ಎಲ್ಲಿ ಹೋದಾಳು, ಒಪ್ಪಿಕೊಂಡಳು. ಅದಕ್ಕೇ ನಿನಗೆ ಹೇಳಿದೆ, ಮದುವೆ ಅಂತ ಮೊದಲು ಮೂವತ್ತು ರೂಪಾಯಿ ಕೊಡು, ಆಮೇಲೆ ಸ್ವಲ್ಪ ಸ್ವಲ್ಪ ಸಹಾಯ ಮಾಡುತ್ತಿರು.'' ಅತ್ತೆ ನೆಟ್ಟ ನೋಟದಿಂದ ಬಿಲ್ಲೇಸುರರನ್ನು ನೋಡುತ್ತಲಿದ್ದಳು. ಇಷ್ಟು ಕಡಿಮೆ ಹಣ ಕೊಡಲೂ ಒಪ್ಪದಿದ್ದರೆ ಮೂರ್ಖತನವಾದೀತೆಂದು ತಿಳಿದ ಬಿಲ್ಲೇಸುರರು, ''ಸರಿ, ನಾಳೆ ಜಾತಕವನ್ನೂ ಒಂದು ರೂಪಾಯಿಯನ್ನೂ ತಗೊಂಡು ಹೋಗು, ಮೂರು-ನಾಲ್ಕು ದಿನಗಳಲ್ಲಿ ನಾನು ಬಂದು ಹೇಗೆ ಕೂಡಿಬರುತ್ತದೆ ಅಂತ ಜ್ಯೋತಿಷಿಗಳಲ್ಲಿ ವಿಚಾರಿಸುತ್ತೇನೆ'' ಅಂದರು.

''ಒಂದು ಸಲವಲ್ಲ ಮಗೂ, ಹತ್ತು ಸಲ ವಿಚಾರಿಸು. ಆದರೆ ಬರುವಾಗ ಕನಿಷ್ಠ ಪಕ್ಷ ಹದಿನೈದು ರೂಪಾಯಿಯನ್ನಾದರೂ ತಗೊಂಡು ಬಾ.''

ಬಿಲ್ಲೇಸುರರು ಗಂಭೀರರಾಗಿ ಎದ್ದು ಕೈ-ಬಾಯಿ ತೊಳೆದುಕೊಳ್ಳತೊಡಗಿದರು. ಮನದಲ್ಲೇ ಸಮಾಧಾನ ಹೇಳಿಕೊಳ್ಳುತ್ತಾ ಅತ್ತೆಯೂ ಊಟಕ್ಕೆ ಕೂತಳು. ಊಟದ ನಂತರ ಇಬ್ಬರೂ ಮಲಗಿಕೊಂಡು ತಮ್ಮ ತಮ್ಮ ಸಮಸ್ಯೆಗಳಿಗೆ ಪರಿಹಾರ ಹುಡುಕುವುದರಲ್ಲಿ ಮಗ್ನರಾದರು. ಯಾರೂ ಯಾರನ್ನೂ ಮಾತಾಡಿಸಲಿಲ್ಲ. ಆಮೇಲೆ ಅವರು ಮಲಗಿ ನಿದ್ರಿಸಿದರು. ಬೆಳಕು ಮೂಡುವ ಮುನ್ನ ಇನ್ನೂ ಆಕಾಶದಲ್ಲಿ ಚಿಕ್ಕೆಗಳಿದ್ದಾಗಲೇ ಮನ್ನಿಯ ಅತ್ತೆ ಎದ್ದು, ಬಿಲ್ಲೇಸುರರನ್ನೂ ಎಚ್ಚರಿಸುವ ಉದ್ದೇಶದಿಂದ ಗಟ್ಟಿಯಾಗಿ ರಾಮನಾಮ ಜಪಿಸತೊಡಗಿದಳು.

ಬಿಲ್ಲೇಸುರರು ಎದ್ದು ಕೂತು ಕಣ್ಣು ತಿಕ್ಕಿಕೊಂಡು ಅಂತಃಕರಣದಿಂದ ಕೇಳಿದರು, ''ಏನಮ್ಮಾ, ನಸುಕಿನಲ್ಲೇ ಹೊರಟುಬಿಡುವ ವಿಚಾರವಿದೆಯೇ?''

ಮನ್ನಿಯ ಅತ್ತೆಯ ಕಣ್ಣು ತುಂಬಿಬಂದವು. ಆಕೆ, ''ಮಗೂ, ಇನ್ನೂ ತಡ ಮಾಡುವುದು ಒಳ್ಳೆಯದಲ್ಲ; ತಡ ಮಾಡಿ ಹೊರಟರೆ ಅಲ್ಲಿ ತಲುಪಲು ರಾತ್ರಿಯಾಗುವುದು, ಕೆಲಸ ಆಗುವುದಿಲ್ಲ'' ಅಂದಳು.

ಬಿಲ್ಲೇಸುರರು ಕತ್ತಲಲ್ಲಿ ಕೈಯಾಡಿಸಿ ಸಂದೂಕದಲ್ಲಿಟ್ಟಿದ್ದ ಜಾತಕವನ್ನು ಹೊರತೆಗೆದು ಅತ್ತೆಗೆ ಕೊಡುತ್ತ ಹೇಳಿದರು, ''ಜೋಪಾನ, ಎಲ್ಲಾದರೂ ಕಳೆದುಹೋದೀತು.''

''ಇಲ್ಲ ಮಗೂ, ಹೇಗೆ ಕಳೆದೀತು?'' ಅನ್ನುತ್ತ ಆಕೆ ಕಾಳಜಿಯಿಂದ ಜಾತಕವನ್ನು ತೆಗೆದುಕೊಂಡಳು. ಬಿಲ್ಲೇಸುರರು ಸಂಚಿಯಿಂದ ಒಂದು ರೂಪಾಯಿ ಹೊರತೆಗೆದು ಅತ್ತೆಯ ಕೈಯಲ್ಲಿಟ್ಟು ಆಕೆಯ ಕಾಲುಮುಟ್ಟಿ ನಮಸ್ಕರಿಸಿದರು, ''ನಿನಗೆ ನಾನು ಏನೂ ಕೊಡಲಾಗಲಿಲ್ಲ.''

''ನಾನೇನಾದರೂ ಕೇಳಿದೆನೇ ಮಗೂ?''ತನ್ನ ಅಸಮಾಧಾನವನ್ನು ಹತ್ತಿಕ್ಕಿಕೊಳ್ಳುತ್ತ ಆಕೆ ಹೊರ ನಡೆದಳು. ದಾರಿಗೆ ಬಂದು ಒಮ್ಮೆ ಉಸಿರು ಬಿಟ್ಟು ಊರಿನ ದಾರಿ ಹಿಡಿದಳು. ಆಗ ಪೂರಾ ಬೆಳಗಾಗಿತ್ತು.

## ಹದಿನಾರು

ಇತ್ತ ಬಿಲ್ಲೇಸುರರು ದೊಡ್ಡ ಕೆಲಸವನ್ನೇ ಮಾಡಿದರು. ಗೆಣಸು ಹಾಕಿದ್ದ ಹೊಲದಲ್ಲಿ ಬಟಾಣಿ ಬಿತ್ತಿದರು. ಅತ್ತಕಡೆಯ ಹೊಲದಲ್ಲಿ ಕಡಲೆ ಹಾಕಿದ್ದರು, ಅವು ಈಗಾಗಲೇ ಸಾಕಷ್ಟು ಮೇಲೆ ಬಂದಿದ್ದವು.

ಕೆಲಸ ಮಾಡುತ್ತಿದ್ದಾಗ ಬಿಲ್ಲೇಸುರರಿಗೆ ತಡೆ ತಡೆದು ಅತ್ತೆಯ ನೆನಪು ಬರುತ್ತಿತ್ತು, ಮದುವೆಯ ಬಳ್ಳಿಯಲ್ಲಿ ಮೊಗ್ಗುಗಳು ಬಿಡತೊಡಗಿದವು; ಕೆಲಸ ಮಾಡುವಾಗ ಮನಸ್ಸು ಚಂಚಲವಾಗತೊಡಗಿತು; ಉಸಿರು ಭಾರವಾಗತೊಡಗಿತು. ರೋಮಗಳು ನಿಮಿರಿ ನಿಲ್ಲತೊಡಗಿದವು.

ಕೊನೆಗೆ ಹೊರಡುವ ದಿನ ಬಂದಿತು. ಬಿಲ್ಲೇಸುರರು ಹಾಲು ಕರೆದು, ಒಂದು ತಂಬಿಗೆಯಲ್ಲಿ ಹಾಕಿ ಬಾಯಿಕಟ್ಟಿ, ತೆಗೆದುಕೊಂಡು ಹೋಗಲು ತಯಾರಾದರು. ರಾತ್ರಿ ಕೊಯ್ದಿಟ್ಟ ಎಲೆಗಳನ್ನು ಆಡುಗಳ ಮುಂದೆ ಹಾಕಿದರು.

ನಂತರ ನೀರು ತುಂಬಿ ಮನೆಯಲ್ಲೇ ಸ್ನಾನ ಮಾಡಿದರು. ತುಸು ಹೊತ್ತು ಪೂಜೆ ಮಾಡಿದರು. ದಿನಾಲೂ ಪೂಜೆ ಮಾಡುತ್ತಿದ್ದರೆಂದೇನೂ ಅಲ್ಲ. ಪೂಜೆ ಮಾಡುವಾಗ ಅನೇಕ ಸಲ ಕನ್ನಡಿ ನೋಡಿಕೊಂಡರು, ಕಣ್ಣು-ಹುಬ್ಬುಗಳನ್ನು ಏರಿಸಿ-ಇಳಿಸಿ ಗಲ್ಲ ಉಬ್ಬಿಸಿ-ಒಳತೆಗೆದುಕೊಂಡು ತುಟಿ ಅಗಲಿಸಿ-ಕಿರಿದುಗೊಳಿಸಿ ನೋಡಿಕೊಂಡರು. ಗಂಧ ಹಚ್ಚಿಕೊಂಡು ಮತ್ತೊಮ್ಮೆ ನೋಡಿಕೊಂಡರು. ಮೈಲಿಯ ಕಲೆಗಳು ಎದ್ದು ಕಾಣುತ್ತವೆಯೇ ಎಂದು ಕಣ್ಣಗಲಿಸಿ ಬಹಳ ಹೊತ್ತು ನೋಡಿಕೊಂಡರು. ಬಳಿಕ ಕೆಲಸ ಆಗುತ್ತದೆನ್ನುವ ವಿಶ್ವಾಸದಿಂದ ಮನಸ್ಸಿನಲ್ಲಿ ತಪ್ಪು ತಪ್ಪಾಗಿ ಗಾಯತ್ರಿ ಮಂತ್ರ ಜಪಿಸಿದರು. ನಂತರ ಪೂಜೆಯ ಪರಿಕರಗಳನ್ನು ಎತ್ತಿ ಮೇಲಿನ ಮಾಡಿನಲ್ಲಿಟ್ಟು ತಂಗಳು ರೊಟ್ಟಿ ಹೊರತೆಗೆದರು. ತಿಂದು ಕೈ-ಬಾಯಿ ತೊಳೆದು ಬಟ್ಟೆ ತೊಟ್ಟರು. ಕಾಲು ತುಂಬುವಂತೆ ಧೋತರ ಉಟ್ಟು ಜುಬ್ಬಾ ಹಾಕಿಕೊಂಡು ಮಂಚದ ಮೇಲೆ ಕೂತು ಪೇಟ ಸುತ್ತಿಕೊಳ್ಳತೊಡಗಿದರು. ಎಲ್ಲ ಮುಗಿಸಿ ಮತ್ತೆ ಕನ್ನಡಿಯಲ್ಲಿ ನೋಡಿಕೊಳ್ಳುತ್ತ ವಿವಿಧ ರೀತಿಯ ಮುಖಮುದ್ರೆ ಮಾಡತೊಡಗಿದರು. ಆಮೇಲೆ ಕಿಸೆಯಲ್ಲಿ ಒಂದು ಚಿಕ್ಕ ಕನ್ನಡಿ ಇಟ್ಟುಕೊಂಡು, ಕುತ್ತಿಗೆಯ ಸುತ್ತ ಅಂಗವಸ್ತ್ರವನ್ನು ಸುತ್ತಿಕೊಂಡು ಗಂಟುಹಾಕಿಕೊಂಡು ಬಡಿಗೆಯನ್ನೆತ್ತಿಕೊಂಡರು. ಜೋಡುಗಳಿಗೆ ಮೊದಲೇ ಎಣ್ಣೆಯುಣಿಸಿ ಇಟ್ಟಿದ್ದರು. ಅವನ್ನು ಮೆಟ್ಟಿಕೊಂಡು ಮನೆಯಿಂದ ಹೊರಬಿದ್ದು ಕೀಲಿ ಹಾಕಿದರು. ಬಳಿಕ ಮೂಗಿನ ಎರಡೂ ಹೊಳ್ಳೆಗಳಲ್ಲಿ ಯಾವುದರಲ್ಲಿ ನೇರವಾಗಿ ಉಸಿರಾಡುತ್ತಿದೆಯೋ ನೋಡಿಕೊಂಡು, ಅದೇ ಕಡೆ ಬಲಗಾಲನ್ನು ಮೂರು ಸಲ ಎತ್ತಿ ಕುಕ್ಕಿದರು; ಹಾಲಿನ ತಂಬಿಗೆಯನ್ನೆತ್ತಿಕೊಂಡು ತಲೆತಗ್ಗಿಸಿ ಗಂಭೀರವಾಗಿ ನಡೆದರು. ಹಳ್ಳ ಬಂದಿತು. ದಂಡೆಗುಂಟ ಬೇವು ಮತ್ತು ಜಾಲಿಯ ಗಿಡಗಳು. ದಂಡೆಗುಂಟ ಇರುವ ದಾರಿ ಹಿಡಿದು ಮುಂದೆ ನಡೆದರು. ದೊಡ್ಡ ಕೆರೆಯ ದಂಡೆಯ ಪಕ್ಕದಲ್ಲಿ ಹಾಯ್ದು ಹೋಗುವಾಗ ಇವರನ್ನು ನೋಡಿ ಕೆಲವು ಹಕ್ಕಿಗಳು ಈ ದಂಡೆಯಿಂದ ಆ ದಂಡೆಗೆ ಹಾರಿ ಹೋದವು. ಬಿಲ್ಲೇಸುರರು ಮುಂದೆ ಸಾಗಿದರು. ಶಮಶೇರಗಂಜ ಬಂದಿತು. ಒಂದೆಡೆ ಈಚಲು ಗಿಡಗಳಿದ್ದವು. ಎದುರಿಗೆ ಹಸಿರು ತುಂಬಿ

ಸೂಸುವ ಹೊಲಗಳು ಹುಲ್ಲಿನ ಮೇಲೆ ಸೂರ್ಯನ ಕಿರಣಗಳು ಮಿಂಚುತ್ತಿದ್ದವು. ಎದೆಯಲ್ಲಿ ಕಚಗುಳಿಯಿಟ್ಟಂತಾಗುತ್ತಿತ್ತು. ಹೆಜ್ಜೆಗಳು ವೇಗವಾಗಿ ಬೀಳತೊಡಗಿದವು. ಕೈಯಲ್ಲಿ ಹಾಲು ತುಂಬಿದ ಭಾರವಾದ ತಂಬಿಗೆಯಿರುವುದೂ ಗಮನಕ್ಕೆ ಬರಲಿಲ್ಲ.

ಮಾವು ಮತ್ತು ಅತ್ತಿ ಹಣ್ಣಿನ ಗಿಡಗಳು ಕಚ್ಚಾ ರಸ್ತೆಯ ಎರಡೂ ಬದಿಗೂ ಬೆಳೆದಿದ್ದವು. ಚಳಿಗಾಲದ ಸ್ನಿಗ್ಧ ಬಂಗಾರ ಬಣ್ಣದ ಬಿಸಿಲು ಎಲ್ಲೆಡೆ ಸೂಸಿತ್ತು. ಇಡೀ ಜಗತ್ತೇ ಬಂಗಾರ ಬಣ್ಣದ್ದಾಗಿರುವಂತೆ ಕಂಡಿತು. ಬಡತನದ ಬಣ್ಣ ಕೊಂಚವೂ ಉಳಿದಿರಲಿಲ್ಲ. ಚಿಕ್ಕ-ದೊಡ್ಡ ಪ್ರತಿಯೊಂದು ಗಿಡದ ಮೇಲಿನ ಋತುವಿನ ಪ್ರಭಾವವು ಬಿಲ್ಲೇಸುರರ ಮೇಲೂ ಆಗತೊಡಗಿತ್ತು. ಅನುಕೂಲ ದಿಸೆಯಲ್ಲಿ ಬೀಸುತ್ತಿರುವ ಗಾಳಿಗುಂಟ ಹಾರಿ ಹೋಗುವ ಎಲೆಯ ಹಾಗೆ ಬಿಲ್ಲೇಸುರರು ಹಗುರವಾಗಿ ನಡೆಯತೊಡಗಿದರು. ಈ ವ್ಯವಹಾರದಲ್ಲಿ ಅವರಿಗೆ ತುಂಬ ಲಾಭವಿದೆಯೆಂದು ಮನವರಿಕೆಯಾಗಿತ್ತು. ಸುತ್ತೆಲ್ಲ ಹಸಿರು. ಕಣ್ಣು ಹಾಯಿಸಿದಷ್ಟು ದೂರಕ್ಕೆ ಹಸಿರಿನ ತರಂಗಗಳೇ ತೇಲುತ್ತಿದ್ದವು; ಅವುಗಳೊಡನೆ ಒಂದಾಗಿ ಹೃದಯವೂ ಹಾಗೆ ಗಾಳಿಯಲ್ಲಿ ತೇಲತೊಡಗಿತ್ತು.

ಆಸೆ ಫಲಿಸಿದ ಹಾಗೆ ಹೊಲ-ತೋಟಗಳ ನಡುವಿನಿಂದ ಊರಿನ ಗೋಡೆಗಳು ಕಾಣತೊಡಗಿದವು. ಬಿಲ್ಲೇಸುರರು ಅತ್ಯಾತುರದಿಂದ ಮುಂದೆ ನಡೆದರು. ಓಣಿಗಳನ್ನು ದಾಟುತ್ತಾ ಊರಲ್ಲಿ ನಡೆದರು. ಬಾವಿಯ ದಂಡೆಗೆ ಸ್ನಾನ ಮಾಡಲೆಂದು ಕಟ್ಟಿಸಿದ್ದ ಒಂದು ಕಟ್ಟೆಯ ಮೇಲೆ ಒಬ್ಬ ಮುದುಕ ಕೂತು ಸೂರ್ಯನೆಡೆ ಮುಖ ಮಾಡಿ ನಡುಗುತ್ತ ಜಪಮಾಲೆ ಹಿಡಿದು ಜಪಿಸುತ್ತ ಕೂತಿದ್ದ. ತುಸು ಮುಂದೆ ಹೋದ ನಂತರ ಬಡಿಗನ ಅಂಗಡಿ ಸಿಕ್ಕಿತು. ಚಕ್ಕಡಿಯ ಗಾಲಿಯನ್ನು ಬಡಿಯುವ ಠಕ್-ಠಕ್ ಎಂಬ ಸಪ್ಪಳ ದೂರದವರೆಗೆ ಕೇಳಿಬರುತ್ತಿತ್ತು. ಇನ್ನೂ ಮುಂದೆ ದರ್ಜಿಯ ಅಂಗಡಿಯಿತ್ತು. ಅಲ್ಲಿ ಬಹಳ ಜನ ಸೇರಿದ್ದ ಹಾಗೆ ಕಾಣಿಸಿತು. ಹೋಲಿಯಲೆಂದು ಬಂದ ಬಣ್ಣ ಬಣ್ಣದ ಬಟ್ಟೆಗಳು ಎಲ್ಲ ಕಡೆ ಹರಡಿದ್ದವು. ದರ್ಜಿ ತಲೆಬಾಗಿಸಿ ಒಂದೇ ಸಮನೆ ಮಶೀನನ್ನು ತಿರುಗಿಸುವುದರಲ್ಲಿ ಮಗ್ನನಾಗಿದ್ದ. ಒಬ್ಬ ಹುಡುಗ ಆ ತುದಿಗೆ ಕೂತು ದೊಡ್ಡದೊಂದು ಹೊದಿಕೆಗೆ ಹೊಲಿಗೆ ಹಾಕುತ್ತಿದ್ದ. ಇನ್ನಿಬ್ಬರು ಹೊಸ ಬಟ್ಟೆ ಕತ್ತರಿಸಿ ಮಶೀನಿನ ಮೇಲೆ ಹಾಕಲು ಕೈಹೊಲಿಗೆ ಹಾಕುತ್ತಿದ್ದರು. ಜನರು ಆ ಬಣ್ಣಗಳನ್ನು ನೋಡುತ್ತ ತಂಬಾಕು ಉಗುಳುತ್ತ ಹರಟೆ ಹೊಡೆಯುತ್ತ ನಿಂತಿದ್ದರು. ಬಿಲ್ಲೇಸುರರು ಏಕಚಿತ್ತದಿಂದ ದಾರಿ ಸವೆಸುತ್ತ ಅತ್ತೆಯ ಮನೆಯ ದಿಕ್ಕಿನಲ್ಲಿ ಮುಂದೆ ನಡೆದರು. ಒಂದು ಸಂದಿಯಲ್ಲಿ ಅತ್ತೆಯ ಅರ್ಧಬಿದ್ದು ಹೋಗಿದ್ದ ಮನೆ ಇತ್ತು. ಬಾಗಿಲು ತೆರೆದಿತ್ತು. ಕೂಗಿ ಕರೆಯುತ್ತಾ ಒಳ ನಡೆದರು. ಅತ್ತೆ ದಾರಿ ಕಾಯುತ್ತಲಿದ್ದಳು. ಅವರನ್ನು ನೋಡಿ ಮುಗುಳ್ನಗುತ್ತ ಎದ್ದಳು. ಕಣ್ಣು ತಂಬಿಗೆಯ ಮೇಲಿತ್ತು. ಬಿಲ್ಲೇಸುರರು ಗರ್ವದಿಂದ ತಂಬಿಗೆಯನ್ನು ಕೆಳಗಿರಿಸಿ ಆಕೆಗೆ ಕಾಲು ಮುಟ್ಟಿ ನಮಸ್ಕರಿಸಿದರು. ಅನೇಕ ವರ್ಷಗಳ ನಂತರ ಭೇಟಿಯಾದ ಹಾಗೆ ಅತ್ತೆ ಕ್ಷೇಮ ವಿಚಾರಿಸಿದಳು. ಕರೆದೊಯ್ದು ಹೊರಸಿನ ಮೇಲೆ ಕೂಡಿಸಿ, ಮದುವೆಗಾಗಿ ಉದ್ವಿಗ್ನಗೊಂಡ ಬಿಲ್ಲೇಸುರರ ಕಣ್ಣುಗಳನ್ನೇ ನೋಡತೊಡಗಿದಳು.

ತುಸುಹೊತ್ತು ಬಿಲ್ಲೇಸುರರು ಗಂಭೀರವಾಗಿ ಕೂತಿದ್ದರು; ಬಳಿಕ ದೃಢವಾದ ದನಿಯಲ್ಲಿ ಸಭ್ಯ ಗ್ರಹಸ್ಥರ ಹಾಗೆ ಕೇಳಿದರು, "ಮದುವೆಯು ಕೂಡಿ ಬರುತ್ತದೆಯೋ ಹೇಗೆ ಅಂತ

ಕೇಳಿರಬೇಕಲ್ಲ?''

ಅತ್ತೆಯ ಮಾತುಕತೆಗಳು ಸಮುದ್ರದ ಮೇಲೆ ಬಿರುಗಾಳಿ ಬೀಸಿದ ಹಾಗೆ ಉದ್ವೇಗದಿಂದ ಹೊರಬರತೊಡಗಿದವು, ಹುಡುಗಿಯನ್ನು ಆಕೆ ಹಾಡಿ ಹೊಗಳ ತೊಡಗಿದಳು- ಆಕೆ ಜ್ಯೋತಿಷಿಗಳ ಕಡೆ ಹೇಗೆ ಹೋಗಿದ್ದಳು. ಅವರು ಜಾತಕ ಕೂಡಿಸಿ ನೋಡಿ, ಹೇಳಿದ್ದರು, ''ಸಾಕ್ಷಾತ್ ಲಕ್ಷ್ಮಿ ಇದ್ದಂತಿದ್ದಾಳೆ. ಮನೆಯಲ್ಲಿ ಕಾಲಿರಿಸುತ್ತಲೇ ಮನೆ ತುಂಬಿ ಹೋಗುವುದು.'' ಜಾತಕ ಚೆನ್ನಾಗಿ ಹೊಂದುತ್ತದೆ, ಹುಡುಗಿ ವೈಶ್ಯ ವರ್ಣ ಮತ್ತು ದೇವಗಣ, ಬಿಲ್ಲೇಸುರರ ಜಾತಕದೊಂದಿಗೆ ಯಾವ ವೈರುಧ್ಯವೂ ಇಲ್ಲ, ಜೊತೆಗೇ ಇನ್ನೊಂದು ಮಾತು ಹೇಳಿದರು-ಕುಲದಲ್ಲಿ ಉಚ್ಚರಾದ್ದರಿಂದ ಬಿಲ್ಲೇಸುರರು ತಾವು ದುರ್ಗಾದಾಸರ ಮನೆತನದವರೆಂದೇ ಇಲ್ಲಿ ಹೇಳಬೇಕು, ಇಲ್ಲವಾದರೆ ಅವರಿಗೆ ಅವಮಾನವಾಗುತ್ತದೆ.

ಬಿಲ್ಲೇಸುರರ ಆಸೆಗಳು ಗರಿಗೆದರಿದವು. ವಿನಮ್ರರಾಗಿ ಅಂದರು, ''ತಂದೆ-ತಾಯಿ ಹೇಳಿದ್ದನ್ನು ಎಲ್ಲರೂ ಕೇಳಬೇಕಲ್ಲ, ನಿನ್ನ ಆಜ್ಞೆ ಏನಿದ್ದರೂ ನನಗೆ ಸಮ್ಮತಿ.''

ಅತ್ತೆ ಸಂತೃಪ್ತಿಯ ಉಸಿರು ಬಿಟ್ಟಳು. ಒಬ್ಬ ಜ್ಯೋತಿಷಿಯನ್ನು ಆಗಲೇ ಹೋಗಿ ಕರೆತಂದಳು. ಜ್ಯೋತಿಷಿಯು ಹೇಳಿಕೊಟ್ಟಂತೆ ಆ ಸಂಬಂಧವನ್ನು ಹೊಗಳಿದ. ಬಿಲ್ಲೇಸುರರು ಶ್ರದ್ಧೆಯಿಂದ ಕೇಳಿಸಿಕೊಂಡರು. ಬರುವ ಮುಹೂರ್ತದಲ್ಲಿ ಲಗ್ನವಾಗುವುದು ನಿಶ್ಚಿತವಾಯಿತು, ಅತ್ತೆಯ ಆದೇಶದಂತೆ ಅವರಲ್ಲೇ ಲಗ್ನವಾಗುವುದೆಂದೂ ನಿಶ್ಚಿತವಾಯಿತು. ಸಂಜೆ ಒಬ್ಬ ಹುಡುಗಿಯನ್ನು ಕರೆತಂದರು. ದೀಪದ ಬೆಳಕಿನಲ್ಲಿ ಬಿಲ್ಲೇಸುರರು ಆಕೆಯನ್ನು ನೋಡಿದರು. ಎಲ್ಲೂ ಏನೂ ದೋಷವಿಲ್ಲೆಂದು ಅವರಿಗೆ ಖಾತ್ರಿಯಾಯಿತು. ಕೈ ಕಾಲುಗಳನ್ನು ನೋಡಿದರೂ ಅವರು ಆಕೆಯ ಮುಖ ನೋಡಲಿಲ್ಲ. ಆಕೆಯ ತಾಯಿಯೊಂದಿಗೆ ಬಹಳ ಹೊತ್ತು ಮಾತಾಡಿದರು. ಅವರಿಗೆ ಧೈರ್ಯ ಹೇಳಿ ಊರಿಗೆ ಹೊರಟರು. ಹಣವನ್ನು ಮನ್ನಿಯ ಅತ್ತೆಗೆ ಕೊಟ್ಟು ಬಂದರು.

## ಹದಿನೇಳು

ಬಿಲ್ಲೇಸುರರು ಯಾವುದೋ ಕೋಟೆಯನ್ನೇ ಗೆದ್ದ ಭಾವದಲ್ಲಿ ಊರಿಗೆ ತಿರುಗಿ ಬಂದರು. ತಲೆಯೆತ್ತಿ ತಿರುಗಾಡತೊಡಗಿದರು. ಮೊದಲಲ್ಲಿ ಜನರು ಗೆಣಸಿನ ಬಗೆಗಿನ ದೊಡ್ಡಸ್ತನ ಅಂದುಕೊಂಡರು; ನಂತರ ರಹಸ್ಯ ಬಯಲಾಯಿತು. ತ್ರಿಲೋಚನರು ಸ್ನೇಹಿತರನ್ನು ಭೆಟ್ಟಿಯಾಗಿ ವಿಚಾರಿಸಿದರು; ಯಾವ ಹುಡುಗಿಯೊಂದಿಗೆ ಸಂಬಂಧ ಜೋಡಿಸಲು ಅವರು ಬಯಸಿದ್ದರೋ ಅದೇ ಹುಡುಗಿ ಎಂದು ತಿಳಿದು ಬಂದಿತು. ಊರಲ್ಲಿನ ಉಂಡಾಡಿ ಗುಂಡರಿಗೂ ಬಿಲ್ಲೇಸುರರಿಗಿಂತ ಹೆಚ್ಚಿನ ವಯಸ್ಸಾದ ಬ್ರಹ್ಮಚಾರಿಗಳಿಗೂ ಒಮ್ಮೆಲೇ ಲಗ್ನದ ಹುಚ್ಚು ಹಿಡಿಯಿತು. ತ್ರಿಲೋಚನರು ಬಿಲ್ಲೇಸುರರ ಬಗ್ಗೆ ಅಲ್ಲಸಲ್ಲದ ಅಪಪ್ರಚಾರ ಮಾಡುತ್ತ ಬಿಸಿ ಹುಟ್ಟಿಸಿದರು: ''ಬ್ರಾಹ್ಮಣರಂತೆ-ಅಪ್ಪ ಯಾರೋ ಗೊತ್ತಿಲ್ಲ. ಯಾರೂ ಸದ್ಗೃಹಸ್ಥರು ಇವನ ಮನೆಯಲ್ಲಿ ನೀರೂ ಕುಡಿಯದ ಹಾಗಾಯಿತು.'' ಜನರಿಗೆ ಇದೆಲ್ಲ ಮನರಂಜನೆಯಾಯಿತು.

ಊರಿನ ಡೋಮರು ಮತ್ತು ಜೀತದವರು ಬಿಲ್ಲೇಸುರರನ್ನು ಸುತ್ತುವರಿದು ತಮಾಷೆಯ

ಮಾತುಗಳನ್ನಾಡತೊಡಗಿದರು. ಮನೆಯ ರೂಪ ಬದಲಾಯಿತು, ದೀಪ ಬೆಳಗಿತು. ವರ್ಷವೊಂದರಲ್ಲಿ ಅಪ್ಪ-ಅಜ್ಜಂದಿರ ಹೆಸರೂ ಮುಂದೆ ಬರುವುದು, ಮೊದಲು ಬರಿದಾದ ಬಾಗಿಲಿಂದ ಉಸಿರುಬಿಟ್ಟು ಹೋಗಬೇಕಾಗುತ್ತಿತ್ತು, ಈಗ ಒಂದಿಷ್ಟು ನಿಲ್ಲಬಹುದು, ಏನನ್ನಾದರೂ ನೀಡಿಸಿಕೊಂಡು ಹೋಗಬಹುದು. ಬಿಲ್ಲೇಸುರರಿಗೆ ಕಚಗುಳಿಯಿಟ್ಟಂತಾಗಿ ಮೀಸೆಯಲ್ಲೇ ನಗುತ್ತಿದ್ದರು. ಈ ಜೀತದವರು ಎಷ್ಟು ಮುಂದುವರಿದರಲ್ಲ ಅಂದುಕೊಳ್ಳುತ್ತಿದ್ದರು. ತಮ್ಮ ನಾಜೂಕು ಪರಿಸ್ಥಿತಿಯ ಪರಿವೆ ಮಾಡದೆ ಲಗ್ನ ಮಾಡಿಕೊಳ್ಳಲು ಹೊರಟಿರುವಲ್ಲ ಅಂತ ಜನರು ಹಾಸ್ಯ ಮಾಡಬಹುದು. ಈ ಜೀತದವರು ಇಂಥ ಪ್ರಸಂಗವನ್ನು ಬಿಡುವವರಲ್ಲ, ಇವರಿಗೆ ಏನಾದರೂ ಕೊಟ್ಟು ಬಾಯಿ ಮುಚ್ಚಿಸದಿದ್ದರೆ ಮುಂದೆ ಸಾಗುವುದೇ ಕಠಿಣವಾದೀತು, ಅಪ್ಪ-ಅಜ್ಜಂದಿರ ಕಾಲದಿಂದ ಉಳಿದು ಬಂದ ಸಂಬಂಧ ಕಡಿದು ಹೋದೀತು. ಲಗ್ನದ ಖರ್ಚನ್ನು ಹೇಗೂ ನಿಭಾಯಿಸಬಲ್ಲೆ ಅಂತ ವಿಶ್ವಾಸವಿತ್ತು.

ಹಜಾಮರವನು ದಿನಾಲು ಬಂದು ಎಣ್ಣೆ ಹಚ್ಚಿ ಕೂದಲನ್ನು ಕತ್ತರಿಸುವ ಬಗ್ಗೆ ಕೇಳತೊಡಗಿದ. ನೀರಿನವನು ಒಂದು ದಿನ ತಾನಾಗಿ ಬಂದು ಎರಡು ಕೊಡ ನೀರು ತುಂಬಿಟ್ಟು ಹೋದ. ಬತ್ತಿಗಳನ್ನು ಹೊಸೆಯಲೆಂದು ಒಂದು ದಿನ ಪಿಂಜಾರನು ಬಂದು ನಾಲ್ಕು ಹಿಡಿ ಹತ್ತಿಯನ್ನು ಕೊಟ್ಟು ಹೋದ. ಮದುವೆಯ ಜೋಡುಗಳನ್ನು ಜರಿ ಹಾಕಿ ಮಾಡುವುದೋ ಅಥವಾ ಸಾದಾ ಇರಲೋ ಎಂದು ಮೋಚಿ ಬಂದು ಕೇಳಿ ಹೋದ. ದಿನಾ ಅರ್ಧರಾತ್ರಿಯ ಹೊತ್ತಿಗೆ ಬಂದು ಕೂಗಿ ಹೋಗುವ ಚೌಕೀದಾರ ತಾನು ಚೆನ್ನಾಗಿ ಗಸ್ತು ತಿರುಗುತ್ತಿದ್ದೇನೆ ಎಂದು ಮನವರಿಕೆ ಮಾಡಿಕೊಟ್ಟ. ಗಂಗಾವಾಸಿ ಬ್ರಾಹ್ಮಣ ಬಂದು ಒಂದು ದಿನ ಎರಡು ಜೊತೆ ಜನಿವಾರಗಳನ್ನು ಕೊಟ್ಟು ಹೋದ. ಒಂದು ದಿನ ಭಟ್ಟರು ಬಂದು ಸೀತಾಸ್ವಯಂವರದ ಕೆಲವು ಶ್ಲೋಕಗಳನ್ನು ಮತ್ತು ಭೂಷಣರ ಅಮೃತ ಶ್ಲೋಕಗಳನ್ನು ಪಠಿಸಿ ಹೋದರು. ಇಂಥ ಹೊತ್ತಿನಲ್ಲಿ ಯಾರೂ ಹಿಂದುಳಿಯಲಿಲ್ಲ.

ಬಿಲ್ಲೇಸುರರ ಆಟ ಗೆಲ್ಲುತ್ತ ನಡೆಯಿತು. ಜಮೀನ್ದಾರರು ಸ್ವತಃ ಅವರ ಹೊಸ್ತಿಲಿಗೆ ಕಾಲಿರಿಸಿದರು. ಇಡೀ ಊರೇ ನಿಬ್ಬೆರಗಾಯಿತು. ಜಮೀನ್ದಾರರೇ ಬಂದಿದ್ದರು, ಲಗ್ನದ ತಯಾರಿ ನಡೆದಿದೆ, ಕನಿಷ್ಠ ಎರಡು ರೂಪಾಯಿಯಷ್ಟನ್ನಾದರೂ ಬಿಲ್ಲೇಸುರರು ನಜರು ಒಪ್ಪಿಸುವರು, ಆಮೇಲೆ ಸಹಾಯ ಬೇಕೆಂದು ಕೇಳುವರು, ಒಂದಿಷ್ಟು ಬೇರೆ ರೀತಿಯಿಂದಲೂ ವಸೂಲು ಮಾಡುವರು, ಕಾನ್‌ಪುರದಿಂದ ಹಿಟ್ಟು -ಸಕ್ಕರೆ ತರಿಸಿದರೆ ಚಕ್ಕಡಿ ಬಾಡಿಗೆಯಷ್ಟೇ ಅಲ್ಲದೆ ಮೇಲೊಂದಿಷ್ಟು ಕೈಖರ್ಚಿಗೆಂದು ಕೊಟ್ಟೇ ಕೊಡುವರು. ತ್ರಿಲೋಚನರೂ ಜಮೀನ್ದಾರರ ಜೊತೆಗೆ ಇದ್ದರು, ಅವರೊಂದಿಗೆ ಕಷ್ಟಪಟ್ಟಾದರೂ ಒಂದಿಷ್ಟು ಏನಾದರೂ ಗಿಟ್ಟಿಸಬಹುದು ಅಂದುಕೊಂಡಿದ್ದರು. ತ್ರಿಲೋಚನರನ್ನು ನೋಡಿ ಬಿಲ್ಲೇಸುರರು ದೃಷ್ಟಿಯನ್ನು ಹೊರಳಿಸಿದರು. ತ್ರಿಲೋಚನರು ಮತ್ತು ಇತರರು ಜಮೀನ್ದಾರರಿಗೆ ಏನಾದರೂ ಕಾಣಿಕೆ ಸಲ್ಲಿಸೆಂದು ಬಿಲ್ಲೇಸುರ -ರನ್ನು ಒಲಿಸಲು ಬಹಳ ಪ್ರಯತ್ನಿಸಿದರು- "ರಿಕ್ತ ಪಾರ್ಣಿನ್ ಪಶ್ಯೇತ್ ರಾಜಾನಾಂ ದೇವತಾಂ ಗುರುಮ್"- ಆದರೂ ಬಿಲ್ಲೇಸುರರು ಒಂದಿಷ್ಟೂ ಮಿಸುಕಲಿಲ್ಲ, ಜಮೀನ್ದಾರರಿಗೆ ಮರ್ಯಾದೆ ಕೊಟ್ಟು ಹಲ್ಲುಮುಡಿ ಕಚ್ಚಿಕೊಂಡು ಕೂತೇ ಇದ್ದರು. ತುಸು ಹೊತ್ತಿನ ನಂತರ ಜಮೀನ್ದಾರರು ಮನಸ್ಸು ಗಟ್ಟಿ ಮಾಡಿ ಎದ್ದರು. ಹಿಂದೆಯೇ ತ್ರಿಲೋಚನರೂ ಎದ್ದರು. ಮುಂದೆ ಹೋದ ನಂತರ ಚೆನ್ನಾಗಿ ಜಮೀನ್ದಾರರ ಕಿವಿಯೂದಿದರು, ನೀವು

ಆಜ್ಞೆಯನ್ನಾದರೂ ಮಾಡಿ ನೋಡಿರಿ ಅಂದರು. ಮರುದಿನದಿಂದ ಊರಲ್ಲಿ ಬಿಲ್ಲೇಸುರರ ಪ್ರತಿಷ್ಠೆ ನಾಲ್ಕು ಪಟ್ಟು ಹೆಚ್ಚಾಯಿತು. ಜಮೀನ್ದಾರರೇ ಸ್ವತಃ ಬಿಲ್ಲೇಸುರರ ಮನೆಗೆ ಹೋಗಿ ಬಂದರು ಅಂದರೆ ಭಿಲ್ಲೇಸುರರ ಬಳಿ ಅಪಾರ ಸಂಪತ್ತು ಇದ್ದಿರಬೇಕೆಂದು ಊರವರು ಅಂದುಕೊಂಡರು. ವಿಧವಿಧದ ವದಂತಿಗಳು ಹಬ್ಬಿದವು. ಯಾರೋ ಅಂದರು, "ಬಂಗಾರದ ಇಟ್ಟಿಗೆಗಳನ್ನು ಎತ್ತಿಕೊಂಡು ಬಂದಿದ್ದಾನೆ, ಯಾರಿಗೂ ಹೇಳುವುದಿಲ್ಲ, ಕಳ್ಳ ಸನ್ಯಾಸಿ, ಎರಡು ವರ್ಷಗಳಲ್ಲಿ ಊರನ್ನೇ ಖರೀದಿಸುತ್ತಾನೆ?" ಇನ್ನಾರೋ ಅಂದರು, "ಮಹಾರಾಜರ ಕಡೆಯಿಂದ ರತ್ನಾದಿಗಳನ್ನು ಕದ್ದು ತಂದಿದ್ದಾನೆ; ಆದರೆ ಮನೆಯಲ್ಲಿ ಇಟ್ಟುಕೊಂಡಿಲ್ಲ, ಹೊರಗೆಲ್ಲೋ ತಿಪ್ಪೆ ಗುಂಡಿಯಲ್ಲಿ ಅಥವಾ ಗಿಡದ ಕೆಳಗೆ ಹುಗಿದು ಇಟ್ಟಿದ್ದಾನೆ, ಕಳ್ಳರಿಗೆ ಸಿಗಬಾರದು ಅಂತ." ಇಂಥ ಮಾತುಗಳು ಹಬ್ಬಿದಂತೆಲ್ಲಾ ಬಿಲ್ಲೇಸುರರ ಎದುರಿಗೆ ಜನರು ತಲೆಬಾಗುತ್ತ ನಡೆದರು. ಬೇರೆ ಊರುಗಳ ಜನರೂ ಹಾಯ್ದು ಹೋಗುವಾಗ ಅವರನ್ನು ಮಾತಾಡಿಸಿ ಹೋಗತೊಡಗಿದರು.

ಒಂದು ದಿನ ಹಜಾಮನನ್ನು ಕರೆದು ಬಿಲ್ಲೇಸುರರು ಹೇಳಿದರು, "ಮನ್ನಿಯ ಊರಾದ ಗೋವರ್ಧನಪುರಕ್ಕೆ ಹೋಗು, ದಿಬ್ಬಣ ತಗೊಂಡು ಬಂದು ಮದುವೆಯಾಗುತ್ತೇವೆಂದು ಹೇಳಿ ಬಾ. ಹುಡುಗಿಯನ್ನು ಮನ್ನಿಯ ಅತ್ತೆ ಕರೆಸಿಕೊಳ್ಳಲಿ, ಅವರ ಮನೆಯಲ್ಲೇ ಬೀಗರೂಟ ಆಗುವುದು. ಉಳಿದದ್ದನ್ನು ಇಲ್ಲಿ ಬಂದು ತಿಳಿದುಕೊಳ್ಳಲಿ?"

ಹಜಾಮ ಹೋಗಿ ಹೇಳಿ ಬಂದ. ಮತ್ತೆ ಬಂಧು-ಬಾಂಧವರಿಗೆಲ್ಲ ಆಮಂತ್ರಣ ಕೊಟ್ಟು ಬರಲೆಂದು ಅರಿಷಿಣದ ಗಂಟು, ಅಡಿಕೆಬೆಟ್ಟೆ ಮತ್ತು ಎಣ್ಣೆಯನ್ನು ತೆಗೆದುಕೊಂಡು ಹೋದ. ಪರಿಚಿತ ಪ್ರತಿಷ್ಠಿತರೆಲ್ಲ ಎರಡೂ ಕಡೆಯಿಂದ ಔತಣ ಪಡೆದು ಉಬ್ಬಿದರು.

ಬಿಲ್ಲೇಸುರರ ದೊಡ್ಡಸ್ತನದ ಬಗ್ಗೆ ಇನ್ನೂ ಹೆಚ್ಚಿನ ಸುದ್ದಿಗಳು ಹಬ್ಬಿದವು. ಅವರು ಈ ಅವಕಾಶ ಕಳೆದುಕೊಳ್ಳಲಿಲ್ಲ. ಬೇರೆ ಊರಿನಿಂದ ಚಕ್ಕಡಿಗಳನ್ನು ತರಿಸಿದರು. ವ್ಯವಹಾರ ಉಳಿಸಿಕೊಳ್ಳಲು ಯಜಮಾನ ಚಕ್ಕಡಿ ಕೊಟ್ಟ. ಬಿಲ್ಲೇಸುರರು ಗೋಧಿ ಬೀಸಿಸಿಕೊಂಡು ಬಂದರು. ಊರಲ್ಲಿನ ನಿರುದ್ಯೋಗಿ ವಿಧವೆಯರಿಂದ ಬೇಳೆ ಒಡೆಸಿದರು. ಕಾನ್‌ಪುರದಿಂದ ಸಕ್ಕರೆ ತರಲು ಮಲಖಾನ ಗಾಣಿಗರವನಿಗೆ ಹೇಳಿದರು. ಉಳಿದ ಬಟ್ಟೆ ಹಾಗೂ ಇತರ ಎಲ್ಲ ಸಾಮಾನುಗಳನ್ನು ಊರಲ್ಲಿನ ನೇಕಾರ, ಬಾಗವಾನ, ಗಾಣಿಗ, ಡೋಮ, ಮೋಚಿ ಮುಂತಾದವರ ಸಹಾಯದಿಂದ ಸಿದ್ಧಗೊಳಿಸದರು. ಆಡುಗಳ ಜೊತೆಗೆ ಬಳಗದ ಜನ ಹೇಗಿರುವರೋ ಎಂದು ಮನೆಯ ಬಗ್ಗೆ ಯೋಚನೆಯಾಗಿತ್ತು. ಆದರೆ ಅದೂ ಪರಿಹಾರವಾಯಿತು; ಎದುರಿನ ಮನೆಯ ಚೌಧರಿಯ ವಿಧವೆ ಒಂದು ಕೋಣೆಯನ್ನು ತನಗಾಗಿ ಇಟ್ಟುಕೊಂಡು ಉಳಿದ ಇಡೀ ಮನೆಯನ್ನು ಕೊಡುವುದಾಗಿ ಉತ್ಸಾಹದಿಂದ ವಚನವಿತ್ತಳು- ಬಿಲ್ಲೇಸುರರ ಸುದೈವದಲ್ಲಿ ಹೀಗೆ ಆಕೆಯೂ ಪಾಲುಗೊಂಡಳು.

ಬಂಧುಗಳು ಬರತೊಡಗಿದರು, ಅವರೆಲ್ಲ ಬಿಲ್ಲೇಸುರರ ತಂದೆಯ ಕಡೆಯವರು-ಅಂದರೆ ಹಣ ಪಡೆದುಕೊಳ್ಳುವವರೇ. ಚೌಧರಿಯವರ ಮನೆಯಲ್ಲಿ ಬಿಡಾರದ ವ್ಯವಸ್ಥೆ ಮಾಡಿದ್ದು ನೋಡಿ ಬೆರಗಾದರು. ಆಡುಗಳೊಂದಿಗೆ ಇರಬೇಕಾಗುವುದೇನೋ ಎಂದು ಮೊದಲು ಹಿಂಜರಿದರೂ, ಬೇರೆ ವಸತಿಯ ವ್ಯವಸ್ಥೆ ಮಾಡಿದ್ದು ತಿಳಿದು ಸಂತೋಷದಿಂದ ಹೊರಗೇ ಊಟ-ಉಡಿಗೆ ಕಳೆದು ಹೋಗುವುದೆಂದು ಯೋಚಿಸಿ ಠಿಕಾಣಿ ಹೂಡಿಯೇ ಬಿಟ್ಟರು.

ತಮ್ಮ ಪರವಾಗಿ ಮದುವೆಯ ಒಡವೆಯೆಂದು ಬಿಲ್ಲೇಸುರರು ಕಂಠೀಸರ, ಮೋಹನ ಮಾಲೆ, ಬಾಜೂಬಂದ ಮಾಡಿಸಿದರು. ವಾಗ್ನಿಶ್ಚಯಕ್ಕಾಗಿ ಉಂಗುರ ತರಿಸಿಕೊಂಡರು. ಮುರಲಿ ಮಹಾಜನನಿಗೆ ಕೈಬಿಚ್ಚಿ ಕೊಡುವುದರಲ್ಲಿ ಏನೂ ಆಪತ್ತು ಕಾಣಲಿಲ್ಲ. ಅವನೂ ಬಿಲ್ಲೇಸುರರ ಮಹಾತ್ಮೆಯ ಬಗ್ಗೆ ಕೇಳಿದ್ದ. ರೂಪಾಯಿಯಲ್ಲಿ ಎರಡಾಣೆಯಷ್ಟು ಮಾತ್ರ ಬೆಲೆ ತೆತ್ತು ಎಲ್ಲ ಒಡವೆಗಳನ್ನು ಬಿಲ್ಲೇ ಸುರರು ಗುಪ್ತವಾಗಿ ಕೊಂಡುಕೊಂಡರು-ಬಳಿಕ ಅವನ್ನು ಸ್ವಚ್ಛಗೊಳಿಸಿ ಮೆರುಗು ಕೊಡಿಸಿದರು. ಕಡಗ, ಕಾಲುಚೈನು ಇವುಗಳನ್ನು ಹಾಗೇ ಬಿಟ್ಟರು.

ಎಣ್ಣೆ ಸ್ನಾನದ ದಿನ ಡೋಮಿಯ ವಿಕಟವಾದ್ಯದ ಸದ್ದು ಊರಲ್ಲೆಲ್ಲಾ ಮೊಳಗಿತು. ಎಲ್ಲರ ಮೇಲೂ ಬಿಲ್ಲೇಸುರರ ಅದೃಶ್ಯ ವೈಭವದ ಪ್ರಭಾವವಾಗಿತ್ತು. ಪಕ್ಕದೂರಿನ ಜಮೀನ್ದಾರರು ಕರವಸೂಲಿ ಮಾಡಿಕೊಂಡು ಹಿಂದಿರುಗಿ ಬರುವಾಗ ಬಿಲ್ಲೇಸುರರ ಮನೆಯೆದುರು ಬಂದರು. ಬಿಲ್ಲೇಸುರರನ್ನು ನೋಡಿ ನಮಸ್ಕರಿಸಿದರು. ಅಸೀಮ ಸಂಪತ್ತಿನ ಬಗ್ಗೆ ಕೇಳಿದ್ದ ಅವರು ಬಿಲ್ಲೇಸುರರಿಗೆ ಹೇಳಿದರು, "ನನಗಂತೂ ಜನರ ಕಣ್ಣುಗಳನ್ನು ನೋಡಿದ ಮಾತ್ರಕ್ಕೆ ಅವರ ಜಾತಿ-ಕುಲ ಎಲ್ಲ ಗೊತ್ತಾಗುತ್ತದೆ. ಲಗ್ನ ಮಾಡಿಕೊಳ್ಳಲು ಹೊರಟಿರುವಿ, ಬೇಕಿದ್ದರೆ ನಮ್ಮ ಕುದುರೆಯನ್ನು ತಗೊಂಡು ಹೋಗು'' ಬಿಲ್ಲೇಸುರರು ತಗ್ಗಿದ ದನಿಯಲ್ಲಿ ಹೇಳಿದರು, "ನಾನು ಬಡ ಬ್ರಾಹ್ಮಣ, ಬ್ರಾಹ್ಮಣನ ಹಾಗೆಯೇ ಹೋಗುತ್ತೇನೆ. ತಾವು ನಮ್ಮ ಮಹಾರಾಜರು, ಎಲ್ಲವನ್ನೂ ಕೊಡಬಲ್ಲಿರಿ.'' ಇವರು ತನ್ನ ಗುಟ್ಟು ಬಿಟ್ಟುಕೊಡುವವನಲ್ಲವೆಂದು ತಿಳಿದುಕೊಂಡ ಠಾಕೂರ ಸಾಹೇಬರು ಮುಗುಳ್ನಕ್ಕರು. ನಮಸ್ಕರಿಸಿ ಅಲ್ಲಿಂದ ಹೊರಟರು.

ಮಾತೃಭೋಜನವಾದ ಮರುದಿನ ದಿಬ್ಬಣ ಹೊರಟಿತು. ಬಾವಿಯ ಪೂಜೆ ಆಯಿತು. ಬಿಲ್ಲೇಸುರರ ಒಬ್ಬ ಕಕ್ಕಿ ಹಾಲು ಹೊಯ್ದಳು. ಕಾಲು ಇಳಿಬಿಟ್ಟುಕೊಂಡು ಬಹಳ ಹೊತ್ತು ಬಾವಿಯ ಕಟ್ಟೆಯ ಮೇಲೆ ಕೂತೇ ಇದ್ದಳು. ಕೇಳಿದರೆ, "ನನಗೆ ಬಂಗಾರದ ಇಟ್ಟಿಗೆ ಬೇಕು" ಅಂದಳು. ಅದರರ್ಥ ತಿಳಿದು ಬಿಲ್ಲೇಸುರರು ಮುಗುಳ್ನಕ್ಕರು. ಊರಿನ ಜನ ಹೇಳಿದರು, "ಆಕೆ ಕೇಳಿದ್ದೇನೂ ತಪ್ಪಲ್ಲ, ಇವತ್ತಲ್ಲದಿದ್ದರೆ ಇನ್ನಾವ ಪ್ರಸಂಗಕ್ಕೆಂದು ಅವನ್ನು ಬಚ್ಚಿಟ್ಟಿದ್ದೀರಿ?" ಬಿಲ್ಲೇಸುರರೆಂದರು, "ಕಕ್ಕಿ, ಇಲ್ಲಿ ಈ ಸದ್ಯಕ್ಕಂತೂ ನಾನು ಬರಿಗ್ಗೆಯಿಂದಿರುವೆ, ಮೊದಲು ಇಲ್ಲಿಂದ ಹೊರಡು. ತಿರುಗಿ ಬಂದ ಬಳಿಕ ನಿನಗೆ ಇಟ್ಟಿಗೆಯನ್ನೇ ಕೊಡುವೆ.'' ಕಕ್ಕಿ ಖುಶಿಯಾದಳು. ಊರವರ ಮುಖಗಳ ಮೇಲಿನ ಕಳೆಯೇ ಹಾರಿ ಹೋಗತೊಡಗಿತು. ಬಿಲ್ಲೇಸುರರ ಬಳಿ ಐವತ್ತಕ್ಕೂ ಹೆಚ್ಚು ಬಂಗಾರದ ಇಟ್ಟಿಗೆಗಳಿವೆಯೆಂದು ಅವರಿಗೆ ಪೂರಾ ವಿಶ್ವಾಸವುಂಟಾಯಿತು.

ದಿಬ್ಬಣ ಹೊರಟಿತು. ಎದುರುಗೊಳ್ಳುವುದು, ವರಪೂಜೆ, ಮದುವೆ, ಬೀಗರೂಟ, ಚಿಕ್ಕ-ದೊಡ್ಡ ವಿಧಿಗಳು, ಆರತಕ್ಷತೆ, ನಾಲ್ಕನೇ ದಿನದ ಕಾರ್ಯಕ್ರಮ, ಎಲ್ಲಾ ಅನುಷ್ಠಾನಗಳು ಪೂರ್ಣವಾದವು. ಅಷ್ಟನ್ನೆಲ್ಲಾ ಇವರೇ ವ್ಯವಸ್ಥೆ ಮಾಡಿದ್ದರು. ಲಗ್ನಕ್ಕೆ ಬಂದ ಮಾನ್ಯರು ಒಟ್ಟು ಐದು ಜನ. ಉಳಿದವರೆಲ್ಲ ನೀರಿನವರು, ಬಜಂತ್ರಿಯವರು, ಬಳಗದವರು. ನಾಲ್ಕು ದಿನಗಳ ನಂತರ ಬಿಲ್ಲೇಸುರರು ವಧುವನ್ನು ಕರೆದುಕೊಂಡು ಮನೆಗೆ ಮರಳಿದರು. ಆನಂತರ ಅವರೆಂದೂ ತಾವು ಶ್ರೀಮಂತರಾದ ರಹಸ್ಯವನ್ನು ಬದುಕಿರುವವರೆಗೂ ಬಿಟ್ಟುಕೊಡಲಿಲ್ಲ.